4) General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of Co-operative Societies (ADM &DEV), Head Office, Bangalore.

The expenditure of Rs. 17,37,800/- (Rupees. Seventeen Lakhs Thirtyseven Thousand Eight Hundred Only) in this behalf towards Government contribution may be met under the budget Head "6416-Loans for Agricultural Financial Institutions –190 Loans to public sector and other undertakings –1 Karnataka State Co-operative Agriculture and Rural Development Bank-01 Loans for purchase of debentures." (6416-00-190-1-01)

P.R. 1865

Registrar of Co-operative Societies,
in Karnataka, Bangalore.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ ಜಿಲ್ಲೆ, ಬೀದರ**

**ವಿಷಯ:** ಸಮಾಪನೆಗೊಂಡ ಲೇದರ ಟ್ಯಾನರ್ಸ್ ಸಹಕಾರ ಸಂಘ ನಿಯಮಿತ, ಲಾಲವಾಡಿ, ಬೀದರ ಇದರ ನೊಂದಣಿ ಸಂಖ್ಯೆ ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ1/ಸಮಾಪನೆ/ 98-99/ ದಿನಾಂಕ: 25.02.1999.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ/ಸನಿಬಿ1/ ವಿ6/ಸಮಾಪನೆ / 2005-2006 / ದಿನಾಂಕ: 30.9.2005

**ಪ್ರಸ್ತಾವನೆ:**

ಲೇದರ ಟ್ಯಾನರ್ಸ್ ಸಹಕಾರ ಸಂಘ ನಿ. ಲಾಲವಾಡಿ, ಬೀದರ ಈ ಸಂಘವು ಸಂಖ್ಯೆ / ಎಆರ್‌ಐ/ ವಿ4 / 70368 / 1956-57/ ದಿನಾಂಕ: 20.03.55 ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1) ರ ಆದೇಶದಲ್ಲಿ ಸಮಾಪನೆಗೊಳಿಸಿ ಕೈಗಾರಿಕಾ ವಿಸ್ತೀರ್ಣಾಧಿಕಾರಿ, ಬೀದರ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೊಂದಣಿ ಸಂಖ್ಯೆ ರದ್ದು ಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಮೂಲಕ ಉಲ್ಲೇಖ (2) ರ ಮುಖೇನ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರು ಸಂಘದಲ್ಲಿ ಯಾವುದೇ ಆಸ್ತಿ - ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದ ನೊಂದಣಿ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಉನಿಬಿ/ ವಿ2 / ಸಮಾಪನೆ / ಸಿಆರ್- / 2005-2006 / 3157 ದಿನಾಂಕ: 22ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 200 / ದಿನಾಂಕ: 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ್ ಆದ ನಾನು ಸಮಾಪನೆಗೊಂಡ ಲೇದರ ಟ್ಯಾನರ್ಸ್ ಸಹಕಾರ ಸಂಘ ನಿ., ಲಾಲವಾಡಿ, ಬೀದರ ಇದರ ನೊಂದಣಿ ಸಂಖ್ಯೆ / ಎಆರ್‌ಐ / ವಿ4 / 70368 / 1956-57 / ದಿನಾಂಕ: 20.03.1955 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದಿತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 30.09.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 1867

ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು**

**ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಶ್ರೀ ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೇರಯ್ಯ, ಚಿಕ್ಕ ಸೀಬಿ ಇವರ ಸ್ಥಿರ ಆಸ್ತಿಗಳನ್ನು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ತುಮಕೂರು ಇವರ ಹೆಸರಿಗೆ ವರ್ಗಾವಣೆಗೊಂಡಿರುವ ಆಸ್ತಿಯನ್ನು ಪುನರ್ ವರ್ಗಾಯಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಎ.ಆರ್.ಟಿ./ಎ.ಬಿ.ಎನ್/ಸಿ.ಆರ್/61/ 2002-03 ದಿನಾಂಕ: 02.05.2002.

2) ವ್ಯವಸ್ಥಾಪಕರು, ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ಲಿ., ತುಮಕೂರು ಇವರ ಪತ್ರ ಸಂಖ್ಯೆ 168/ 2005-06 ದಿನಾಂಕ: 07.11.2005.

**ಪ್ರಸ್ತಾವನೆ:**

ಶ್ರೀ ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೇರಯ್ಯ, ಚಿಕ್ಕ ಸೀಬಿ, ತುಮಕೂರು ತಾಲ್ಲೂಕು ಇವರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನಲ್ಲಿ ಕೋಳಿ ತೆಂಗು ಸಾಲ ಪಡೆದು ಸುಸ್ತಿದಾರರಾಗಿದ್ದರಿಂದ ಇವರಿಂದ ಬರಬೇಕಾದ ಅಸಲು ಬಡ್ಡಿ ಮತ್ತು ಇತರೆ ಖರ್ಚು ಒಟ್ಟು ರೂ. 3,35,000-00 ಗಳ ವಸೂಲಾತಿಗಾಗಿ ಡಿಕ್ರಿ ಆದೇಶ ಪಡೆದು ಅಮಲ್ಜಾರಿ ಸಂಖ್ಯೆ 108, 109 / 2000-01 ರೀತ್ಯಾ ಅಮಲ್ಜಾರಿ ಪಡೆಯಲಾಗಿದ್ದರ ಮೇರೆಗೆ ದಿನಾಂಕ 21.05.2001 ರಂದು ಬಹಿರಂಗವಾಗಿ ಇವರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಗಳನ್ನು

ಹರಾಜು ನಡೆಸಿ, ಹರಾಜಿನಲ್ಲಿ ಯಾರು ಬಿಡ್ಡುದಾರರು ಬಾರದೇ ಇದ್ದುದರಿಂದ ಮಾರಾಟಾಧಿಕಾರಿಗಳ ನಡವಳಿಕೆ ಮೇರೆಗೆ ಉಲ್ಲೇಖ (1) ರ ಆದೇಶದಲ್ಲಿ ಇವರ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು. ತರುವಾಯ ದಿನಾಂಕ 29.09.2005 ರಸೀತಿ ನಂ. 4776 ಮತ್ತು 4778 ರ ಪ್ರಕಾರ ಶ್ರೀ ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಚಿಕ್ಕ ಸೀಬಿ, ತುಮಕೂರು ತಾಲ್ಲೂಕು ಇವರು ಪೂರಾ ಹಣವನ್ನು ಸಾಲ ನೀಡಿದ ಬ್ಯಾಂಕಿಗೆ (ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು) ಪಾವತಿಸಿರುತ್ತಾರೆ. ಹಾಗೂ ಬ್ಯಾಂಕಿನ ವ್ಯವಸ್ಥಾಪಕರು ದಿನಾಂಕ 07.11.2005 ರಂದು ಸಾಲ ತೀರುವಳಿ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಮತ್ತು ಸದರಿ ಸ್ಥಿರಾಸ್ತಿಗಳ ಬಾಬ್ತು ಭೂಕಂದಾಯವನ್ನು ಸಾಲಗಾರರು ಸರ್ಕಾರಕ್ಕೆ ಪಾವತಿ ಮಾಡಿರುತ್ತಾರೆ. ಇದರಿಂದಾಗಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಸಾಲ ಪೂರಾ ತೀರುವಳಿಯಾಗಿದ್ದು, ಶ್ರೀ ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಚಿಕ್ಕ ಸೀಬಿ ಇವರ ಸ್ಥಿರಾಸ್ತಿ ಸರ್ವೆ ನಂ. 127, 115 ಎಕರೆ ಕ್ರಮವಾಗಿ 3-37, 4-00 ಖುಷ್ಕಿ ಈ ಸ್ಥಿರಾಸ್ತಿಗಳನ್ನು ಬ್ಯಾಂಕಿನ ಹೆಸರಿನಿಂದ ಪುನಃ ಶ್ರೀ ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಚಿಕ್ಕ ಸೀಬಿ, ತುಮಕೂರು ತಾಲ್ಲೂಕು ಇವರ ಹೆಸರಿಗೆ ವರ್ಗಾಯಿಸುವಂತೆ ಕೋರಿ ಉಲ್ಲೇಖ (2) ರಲ್ಲಿ ಬ್ಯಾಂಕಿನ ಆಡಳಿತ ಮಂಡಳಿಯ ದಿನಾಂಕ 14.10.2005 ರ ತೀರ್ಮಾನದೊಂದಿಗೆ, ಮನವಿ ಸಲ್ಲಿಸಿರುತ್ತಾರೆ. ಈ ಸಂಬಂಧ ಸಾಲ ತೀರುವಳಿ ಪತ್ರ ನೀಡಿರುತ್ತಾರೆ. ಸದರಿಯವರ ಮನವಿಯನ್ನು ಒಪ್ಪಿ ಉಲ್ಲೇಖ (1) ರಲ್ಲಿ ದಿನಾಂಕ 02.05.2002 ರಂದು ಹೊರಡಿಸಿದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕ್ರ.ಸಂ. ಎ.ಆರ್.ಟಿ. / ಎ.ಬಿ.ಎನ್/ ಸಿ.ಆರ್. 61/ 02-03 ದಿನಾಂಕ 21ನೇ ನವೆಂಬರ್ 2005**

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ. ಜಯಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 38 (ಎ) 12 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿ.ಎಂ.ಡಬ್ಲ್ಯೂ / 69 / ಸಿ.ಸಿ.ಎಂ./ 2001 ದಿನಾಂಕ 21.11.2001 ರ ರೀತ್ಯಾ ಪ್ರಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಚಿಕ್ಕ ಸೀಬಿ, ತುಮಕೂರು ತಾಲ್ಲೂಕು, ಚಿಕ್ಕಸೀಬಿ ಗ್ರಾಮದ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ನೀಡಿದ್ದ ಆದೇಶವನ್ನು ಹಿಂತೆಗೆದುಕೊಂಡು, ಸದರಿ ಸ್ಥಿರಾಸ್ತಿಗಳನ್ನು ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಚಿಕ್ಕ ಸೀಬಿ, ತುಮಕೂರು ತಾಲ್ಲೂಕು ಇವರ ಹೆಸರಿಗೆ ನಿಲ್ಲಿಸಿ ವರ್ಗಾವಣೆ ಆದೇಶ ನೀಡಿರುತ್ತೇನೆ. ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8ರ ನಿಗಧಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

ಈ ಕಛೇರಿಯ ಮೊಹರ್ ಹಾಗೂ ನನ್ನ ಸ್ವಹಸ್ತಾಕ್ಷರದೊಂದಿಗೆ ದಿನಾಂಕ 21.11.2005 ರಂದು ಪುನರ್ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ನಮೂನೆ - 8**

**ಕರ್ನಾಟಕ ಸಹಕಾರ ಸಂಘಗಳ ನಿಯಮ / 1960 / 88ಎ ರೀತ್ಯಾ**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 101 ರ ಅನ್ವಯ ಬಾಕಿಯ ಬಗ್ಗೆ.**

**ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ**

ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು, ಚಿಕ್ಕಸೀಬಿ ಗ್ರಾಮದ ವಾಸಿ ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಇವರ ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 71 (ರನ್ವಯ) ಆದೇಶವನ್ನು ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ 02.05.2002 ರ ಈ ಕಛೇರಿ ಆದೇಶದ ಅಡಿಯಲ್ಲಿ, ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರಿಗೆ ವರ್ಗಾಯಿಸಿದ್ದು, ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಗಳನ್ನು ಮೂಲ ಹಕ್ಕುದಾರರಿಗೆ ಪುನರ್ ವರ್ಗಾಯಿಸುವಂತೆ ಬ್ಯಾಂಕಿನ ಕೋರಿಕೆ ಮೇರೆಗೆ ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು, ಅಧಿಕಾರ, ನಾಮ, ಮತ್ತು ಬಾಧ್ಯತೆಯನ್ನು ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಚಿಕ್ಕ ಸೀಬಿ, ತುಮಕೂರು ತಾಲ್ಲೂಕು ಇವರಿಗೆ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಾವಳಿಗಳಿಗೆ ಒಳಪಟ್ಟು ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಚಿಕ್ಕ ಸೀಬಿ ಗ್ರಾಮ ತುಮಕೂರು ತಾಲ್ಲೂಕು ಇವರಿಗೆ ಒಪ್ಪಿಸತಕ್ಕದೆಂದು ಅಧಿನಿಯಮ 101 ಪ್ರಕಾರದ ಅನ್ವಯ ಈ ಮೇಲಿನ ಆದೇಶ ನೀಡಲಾಗಿದೆ.

**ಸ್ವತ್ತುಗಳ ವಿವರ**

| ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಹಕ್ಕುದಾರರ ವಿವರ |
|---|---|---|---|---|
| 127 | ಚಿಕ್ಕಸೀಬಿ | 3.37 | ಖುಷ್ಕಿ | ಶ್ರೀ ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ ಚಿಕ್ಕಸೀಬಿ, ತುಮಕೂರು ತಾಲ್ಲೂಕು |
| 115 | ಚಿಕ್ಕಸೀಬಿ | 4.00 | ಖುಷ್ಕಿ | - do - |

**ಷರತ್ತು ಮತ್ತು ನಿಯಮಾವಳಿಗಳು**

1. ಟಿ.ಕೆ. ಪರಮೇಶ್ ಬಿನ್ ಟಿ.ಎನ್. ಕಿಕ್ಕೀರಯ್ಯ, ಚಿಕ್ಕ ಸೀಬಿ, ತುಮಕೂರು ತಾಲ್ಲೂಕು ವರ್ಗಾವಣೆ ಮಾಡುವ ಸ್ವತ್ತುಗಳನ್ನು ಇವರೇ ಉಪಯೋಗಿಸತಕ್ಕದ್ದು.
2. ಪುನಃ ಮಾರಾಟ ಮಾಡುವ ಹಕ್ಕು ಇವರು ಹೊಂದಿರುತ್ತಾರೆ.

ಪಿ.ಆರ್. 1868

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು
## ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು

**ವಿಷಯ:** ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು ಗೊಲ್ಲರಹಟ್ಟಿ ಇವರ ಸ್ಥಿರ ಆಸ್ತಿಯನ್ನು ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ತುಮಕೂರು ಇವರ ಹೆಸರಿಗೆ ವರ್ಗಾವಣೆಗೊಂಡಿರುವ ಆಸ್ತಿಯನ್ನು ಪುನರ್ ವರ್ಗಾಯಿಸುವ ಬಗ್ಗೆ

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಎ.ಆರ್.ಟಿ./ಎ.ಬಿ.ಎನ್.ಸಿ.ಆರ್/ 07/ 2001-02 ದಿನಾಂಕ: 20.04.2001.
2) ವ್ಯವಸ್ಥಾಪಕರು, ತುಮಕೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ಲಿ., ತುಮಕೂರು ಇವರ ಪತ್ರ ದಿನಾಂಕ: 26.09.2005.

**ಪ್ರಸ್ತಾವನೆ:**

ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು ತುಮಕೂರು ತಾಲ್ಲೂಕು ಇವರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನಲ್ಲಿ ಪಡೆದ ದನದ ಕೊಟ್ಟಿಗೆ ಸಾಲದ ಯೋಜನೆಯಲ್ಲಿ ರೂ. 30,000-00 ಗಳನ್ನು ಸಾಲ ಪಡೆದು ಸುಸ್ತಿದಾರರಾಗಿದ್ದರಿಂದ, ಇವರಿಂದ ಬರಬೇಕಾದ ಅಸಲು ಬಡ್ಡಿ ಮತ್ತು ಇತರೆ ಖರ್ಚು ಒಟ್ಟು ರೂ. 59,750-00 ಗಳ ವಸೂಲಾತಿಗಾಗಿ ಡಿಕ್ರಿ ಆದೇಶ ಪಡೆದು ಅಮಲ್ಜಾರಿ ಸಂಖ್ಯೆ ನಂ. 238 / 96-97 ರೀತ್ಯಾ ಅಮಲ್ಜಾರಿ ಪಡೆಯಲಾಗಿದ್ದರ ಮೇರೆಗೆ ದಿನಾಂಕ 23.12.1997, 30.10.1998, 21.04.1999, 25.01.2000, 18.05.2000, 22.12.2000, ರಂದು ಬಹಿರಂಗವಾಗಿ ಸದರಿಯವರು ಆಧಾರ ಮಾಡಿಕೊಟ್ಟಿರುವ ಸ್ಥಿರಾಸ್ತಿಗಳನ್ನು ಹರಾಜು ನಡೆಸಿ, ಹರಾಜಿನಲ್ಲಿ ಯಾರು ಬಿಡ್ಡುದಾರರು ಬಾರದೇ ಇದ್ದುದರಿಂದ ಮಾರಾಟಾಧಿಕಾರಿಗಳ ನಡವಳಿಕೆ ಮೇರೆಗೆ ಉಲ್ಲೇಖ (1) ರ ಆದೇಶದಲ್ಲಿ ಇವರ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಹೆಸರಿಗೆ ವರ್ಗಾಯಿಸಿ ಆದೇಶ ನೀಡಲಾಗಿತ್ತು. ತರುವಾಯ ದಿನಾಂಕ 27.06.2005 ರಂದು ರಸೀತಿ ನಂ. 3284 ರ ಪ್ರಕಾರ ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು ಗೊಲ್ಲರಹಟ್ಟಿ ತುಮಕೂರು ತಾಲ್ಲೂಕು ಇವರು ಪೂರಾ ಹಣವನ್ನು ಸಾಲ ನೀಡಿದ ಬ್ಯಾಂಕಿಗೆ (ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು) ಪಾವತಿಸಿರುತ್ತಾರೆ. ಹಾಗೂ ಬ್ಯಾಂಕಿನ ವ್ಯವಸ್ಥಾಪಕರು ದಿನಾಂಕ 24.09.2005 ರಂದು ಸಾಲ ತೀರುವಳಿ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ಮತ್ತು ಸದರಿ ಸ್ಥಿರಾಸ್ತಿಗಳ ಬಾಬ್ತು ಭೂಕಂದಾಯವನ್ನು ಸಾಲಗಾರರು ಸರ್ಕಾರಕ್ಕೆ ಪಾವತಿ ಮಾಡಿರುತ್ತಾರೆ. ಇದರಿಂದಾಗಿ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರ ಸಾಲ ಪೂರಾ ತೀರುವಳಿಯಾಗಿದ್ದು, ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು ಗೊಲ್ಲರಹಟ್ಟಿ ತುಮಕೂರು ತಾಲ್ಲೂಕು ಇವರ ಸ್ಥಿರಾಸ್ತಿ ಯಲದಡ್ಲು ಗ್ರಾಮ ಸರ್ವೆ ನಂ. 109, 3 ಎಕರೆ 26 ಗುಂಟೆ ಖುಷ್ಕಿ, ಈ ಸ್ಥಿರಾಸ್ತಿಗಳನ್ನು ಬ್ಯಾಂಕಿನ ಹೆಸರಿನಿಂದ ಪುನಃ ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು, ಗೊಲ್ಲರಹಟ್ಟಿ ತುಮಕೂರು ತಾಲ್ಲೂಕು ಇವರ ಹೆಸರಿಗೆ ವರ್ಗಾಯಿಸುವಂತೆ ದಿನಾಂಕ 14.09.2005 ರ ಬ್ಯಾಂಕಿನ ತೀರ್ಮಾನದೊಂದಿಗೆ, ಮನವಿ ಸಲ್ಲಿಸಿರುತ್ತಾರೆ. ಈ ಸಂಬಂಧ ಸಾಲ ತೀರುವಳಿ ಪತ್ರ ನೀಡಿರುತ್ತಾರೆ. ಸದರಿಯವರ ಮನವಿಯನ್ನು ಒಪ್ಪಿ ಉಲ್ಲೇಖ (1) ರಲ್ಲಿ ದಿನಾಂಕ 20.04.2001 ರಂದು ಹೊರಡಿಸಿದ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಕ್ರ.ಸಂ. ಎ.ಆರ್.ಟಿ. / ಎ.ಬಿ.ಎಸ್.ಸಿ.ಆರ್./ 7 / 01-02 ದಿನಾಂಕ 16ನೇ ನವೆಂಬರ್ 2005

### ಆದೇಶ

ಶ್ರೀ ಬಿ. ಜಯಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಿ ಅಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ನಿಯಮ 38 (ಎ) 12 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿ.ಎಂ.ಡಬ್ಲ್ಯೂ / 69 / ಸಿ.ಎಲ್.ಎಂ./ 2001 ದಿನಾಂಕ 21.11.2001 ರ ರೀತ್ಯಾ ಪ್ರಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು, ಗೊಲ್ಲರಹಟ್ಟಿ, ತುಮಕೂರು ತಾಲ್ಲೂಕು, ಯಲದಡ್ಲು ಗ್ರಾಮದ ಸ್ಥಿರಾಸ್ತಿಗಳನ್ನು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಬ್ಯಾಂಕಿನ ಹೆಸರಿಗೆ ವರ್ಗಾಯಿಸಲು ನೀಡಿದ್ದ ಆದೇಶವನ್ನು ಹಿಂತೆಗೆದುಕೊಂಡು, ಸದರಿ ಸ್ಥಿರಾಸ್ತಿಗಳನ್ನು ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು ಗೊಲ್ಲರಹಟ್ಟಿ, ತುಮಕೂರು ತಾಲ್ಲೂಕು ಇವರ ಹೆಸರಿಗೆ ನಿಲ್ಲಿಸಿ ವರ್ಗಾವಣೆ ಆದೇಶ ನೀಡಿರುತ್ತೇನೆ. ಸಹಕಾರ ಸಂಘಗಳ ಕಾಯಿದೆ ಅನ್ವಯ ನಮೂನೆ 8ರ ನಿಗಧಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

ಈ ಕಛೇರಿಯ ಮೊಹರ್ ಹಾಗೂ ನನ್ನ ಸ್ವಹಸ್ತಾಕ್ಷರದೊಂದಿಗೆ ದಿನಾಂಕ 16.11.2005 ರಂದು ಪುನರ್ ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

### ನಮೂನೆ - 8
### ಕರ್ನಾಟಕ ಸಹಕಾರ ಸಂಘಗಳ ನಿಯಮ / 1960 / 88ಎ ರೀತ್ಯಾ
### ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 101 ರ ಅನ್ವಯ ಬಾಕಿಯ ಬಗ್ಗೆ.
### ಸ್ಥಿರ ಸ್ವತ್ತುಗಳ ವರ್ಗಾವಣೆ ಪ್ರಮಾಣ ಪತ್ರ

ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು, ಯಲದಡ್ಲು ಗ್ರಾಮದ ವಾಸಿ ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು ಗೊಲ್ಲರಹಟ್ಟಿ, ತುಮಕೂರು ತಾಲ್ಲೂಕು ಇವರ ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 71 (ರನ್ವಯ) ಆದೇಶವನ್ನು ಜಾರಿ ಮಾಡಿದ್ದರಿಂದ ಸದರಿಯವರ ಸ್ಥಿರ ಸ್ವತ್ತುಗಳನ್ನು ದಿನಾಂಕ 20.04.2001 ರ ಈ ಕಛೇರಿ ಆದೇಶದ ಅಡಿಯಲ್ಲಿ, ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ತುಮಕೂರು ಇವರಿಗೆ ವರ್ಗಾಯಿಸಿದ್ದು, ಸದರಿ ಸಾಲಗಾರರಿಂದ ಬ್ಯಾಂಕಿಗೆ ಬರಬೇಕಾಗಿದ್ದ ಪೂರ ಹಣ ಸಂದಾಯವಾಗಿದ್ದು, ಸದರಿ ಸ್ಥಿರಾಸ್ತಿಗಳನ್ನು ಮೂಲ ಹಕ್ಕುದಾರರಿಗೆ ಪುನರ್ ವರ್ಗಾಯಿಸುವಂತೆ ಬ್ಯಾಂಕಿನ ಕೋರಿಕೆ ಮೇರೆಗೆ

ಈ ಕೆಳಕಂಡ ಸ್ಥಿರಾಸ್ತಿಗಳ ಹಕ್ಕು, ಅಧಿಕಾರ, ನಾಮ, ಮತ್ತು ಬಾಧ್ಯತೆಯನ್ನು ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ ಯಲದಡ್ಲು ಗೊಲ್ಲರಹಟ್ಟಿ, ತುಮಕೂರು ತಾಲ್ಲೂಕು, ಇವರಿಗೆ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಾವಳಿಗಳಿಗೆ ಒಳಪಟ್ಟು ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ, ಯಲದಡ್ಲು ಗೊಲ್ಲರಹಟ್ಟಿ, ಗ್ರಾಮ ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ ಇವರಿಗೆ ಒಪ್ಪಿಸತಕ್ಕದೆಂದು ಅಧಿನಿಯಮ 101 ಪ್ರಕಾರದ ಅನ್ವಯ ಈ ಆದೇಶ ನೀಡಲಾಗಿದೆ.

**ಸ್ವತ್ತುಗಳ ವಿವರ**

| ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ಹಕ್ಕುದಾರರ ವಿವರ |
|---|---|---|---|---|
| 109 | ಯಲದಡ್ಲು ಗೊಲ್ಲರಹಟ್ಟಿ | 3.26 | ಖುಷ್ಕಿ | ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ, ಯಲದಡ್ಲು ಗೊಲ್ಲರಹಟ್ಟಿ, ತುಮಕೂರು ತಾಲ್ಲೂಕು |

**ಷರತ್ತು ಮತ್ತು ನಿಯಮಾವಳಿಗಳು**

1. ಶ್ರೀ ನಾಗಯ್ಯ ಬಿನ್ ಜುಂಜಯ್ಯ ಮತ್ತು ಶಿವಣ್ಣ ಬಿನ್ ಜುಂಜಯ್ಯ, ಯಲದಡ್ಲು ಗೊಲ್ಲರಹಟ್ಟಿ, ತುಮಕೂರು ತಾಲ್ಲೂಕು, ವರ್ಗಾವಣೆ ಮಾಡುವ ಸ್ವತ್ತುಗಳನ್ನು ಇವರೇ ಉಪಯೋಗಿಸತಕ್ಕದ್ದು.
2. ಪುನಃ ಮಾರಾಟ ಮಾಡುವ ಹಕ್ಕು ಇವರು ಹೊಂದಿರುತ್ತಾರೆ.

ಪಿ.ಆರ್. 1869

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

## ಸಾರ್ವಜನಿಕ ಶಿಕ್ಷಣ ಇಲಾಖೆ

### ಆಯ್ಕೆ ಪ್ರಾಧಿಕಾರಿ ಹಾಗೂ ಜಿಲ್ಲಾ ಶಿಕ್ಷಣ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಜಿಲ್ಲೆ ಇವರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ

**ಪ್ರಕಟಣೆ ಸಂಖ್ಯೆ: ಪ್ರಾಶಿ : ನೇಮಕ : (ಶಿಮೊ) 05-06, ದಿನಾಂಕ: 28ನೇ ನವೆಂಬರ್ 2005**

2005-06 ನೇ ಸಾಲಿನ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆ ಮತ್ತು ಅರ್ಜಿ ಸಹಿತ ಮಾಹಿತಿ ಪುಸ್ತಕ ಅಧ್ಯಾಯ-2 ರ ಪುಟ ಸಂಖ್ಯೆ 14ರ6(1)(ಎ)(3) ರ ಮೀಸಲಾತಿಯನ್ನು ಶಿಕ್ಷಕರ ನೇಮಕಾತಿಗೆ ಅವಕಾಶವಿಲ್ಲವೆಂದು "ಹಿಂತೆಗೆದುಕೊಳ್ಳಲಾಗಿದೆ".

6) ಪ್ರತಿ ಪ್ರವರ್ಗದಲ್ಲಿ ವಿವಿಧ, ಗುಂಪುಗಳಿಗೆ ಮೀಸಲಾತಿ ಪ್ರಮಾಣ.

1. ಅಂಗವಿಕಲ ಗುಂಪಿಗೆ ಕೆಳಗಿನವರು ಶಿಕ್ಷಕರ ನೇಮಕಾತಿಗೆ ಅರ್ಹರಾಗುತ್ತಾರೆ.

**ವಿವರಣೆ :** ಅಂಗವಿಕಲ ಅಭ್ಯರ್ಥಿ ಎಂದರೆ (ಎ) 1 ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ವ್ಯಕ್ತಿ ಪೈಕಿ ಉತ್ತಮವಾದ ಕಣ್ಣಿನಲ್ಲಿ 6:60 ಅಥವಾ 20:2000 (ಸ್ನಲನ್) ಅನ್ನು ಮೀರದಿರುವ ದೃಷ್ಟಿ ಸಾಮರ್ಥ್ಯ ಇರುವ ವ್ಯಕ್ತಿ

ಅಥವಾ

2. 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರೆ ವಿಸ್ತರಿಸುವ ದೃಷ್ಟಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ
3. ಸಂಪೂರ್ಣವಾಗಿ ದೃಷ್ಟಿ ಸಾಮರ್ಥ್ಯವನ್ನು ಕಳೆದು ಕೊಂಡಿರುವ ವ್ಯಕ್ತಿಯು ಶಿಕ್ಷಕರ ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

ಪಿ.ಆರ್. 1870

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು
(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಜಿಲ್ಲೆ

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ಹಣ್ಣು ಮತ್ತು ತರಕಾರಿ ಬೆಳೆಗಾರರ ಸಹಕಾರ ಸಂಘ ನಿ, ಮೆಳೆಕೋಟೆ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ : ಸನಿ 47 / ನೋಂದಣಿ ರದ್ಧತಿ/ 11.04.05 ದಿನಾಂಕ: 28.10.2005.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ / ಆರ್/ ಎಲ್‌ಕ್ಯೂಡಿ / 78 / 84-85.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಕಛೇರಿಯಲ್ಲಿ ಹಣ್ಣು ಮತ್ತು ತರಕಾರಿ ಬೆಳೆಗಾರರ ಸಹಕಾರ ಸಂಘ ನಿ. ಮೆಳೆಕೋಟೆ ಈ ಸಂಘವು ಸಂ: ಎಆರ್‌ಇ/ ಆರ್‌ಜಿಎನ್/ 227 / 79-80 ದಿ: 10-10-79 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2) ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು. ಅದರಂತೆ ಉಲ್ಲೇಖ (3) ರ ಸಮಾಪನಾಧಿಕಾರಿಗಳ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1) ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಹಣ್ಣು ಮತ್ತು ತರಕಾರಿ ಬೆಳೆಗಾರರ ಸಹಕಾರ ಸಂಘ ನಿ., ಮೆಳೆಕೋಟೆ, ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ ನಂ.ಡಿಆರ್‌ಬಿ / ಆರ್ / ಸಮಾಪನೆ / 36 / 2005-2006, ದಿನಾಂಕ: 18ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69/ ಸಿಎಲ್‌ಎಂ / 2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಎಂ. ವೆಂಕಟೇಶಗೌಡ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಹಣ್ಣು ಮತ್ತು ತರಕಾರಿ ಬೆಳೆಗಾರರ ಸಹಕಾರ ಸಂಘ ನಿ., ಮೆಳೆಕೋಟೆ ದೊಡ್ಡಬಳ್ಳಾಪುರ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಸಂ : ಎಆರ್‌ಇ / ಆರ್‌ಜಿಎನ್ / 227 / 79-80 ದಿ: 10.10.79 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 18.11.2005 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು

ಪಿ.ಆರ್. 1871 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಕಾರ್ಮಿಕ ಇಲಾಖೆ**

**ಅಧಿಸೂಚನೆ ಸಂ: ಕಾಇ 196 ಎಲ್‌ಡಬ್ಲ್ಯೂಎ 2005, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2005.**

ಸರ್ಕಾರದ ಅಧಿಸೂಚನೆ ಸಂಖ್ಯೆ ಕಾಇ 81 ಎಲ್‌ಡಬ್ಲ್ಯೂಎ 2005 ದಿನಾಂಕ 2.5.2005 ರಲ್ಲಿ "ಮೆ: ಕೆನ್‌ಮೆಟಲ್ ವಿಡಿಯಾ ಇಂಡಿಯಾ ಲಿಮಿಟೆಡ್" ನ್ನು "ಸಾರ್ವಜನಿಕ ಅಗತ್ಯ ಸೇವೆ" ಎಂಬುದಾಗಿ ದಿ: 7.6.2005 ರಿಂದ ವಿಸ್ತರಿಸಿ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ, ಸದರಿ ಸಂಸ್ಥೆಯನ್ನು ಇನ್ನೂ ಆರು ತಿಂಗಳ ಕಾಲ "ಸಾರ್ವಜನಿಕ ಅಗತ್ಯ ಸೇವೆ" ಎಂದು ಘೋಷಿಸುವುದು ಅವಶ್ಯವೆಂದು ಕರ್ನಾಟಕ ಸರ್ಕಾರವು ಪರಿಗಣಿಸಿರುವುದರಿಂದ, ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರ ಕಾಯ್ದೆ 1947 ರ ಸಂಖ್ಯೆ 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೆ: ಕೆನ್‌ಮೆಟಲ್ ವಿಡಿಯಾ ಇಂಡಿಯಾ ಲಿಮಿಟೆಡ್" ನ್ನು "ಸಾರ್ವಜನಿಕ ಅಗತ್ಯ ಸೇವೆ" ಎಂಬುದಾಗಿ ದಿನಾಂಕ 7.11.2005 ಮುಂದಿನ ಆರು ತಿಂಗಳ ಅವಧಿಗೆ ಜಾರಿಯಲ್ಲಿರುವಂತೆ ವಿಸ್ತರಿಸಿ, ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1872 **ಎಂ.ಆರ್. ಮಹೇಶ್‌ಕುಮಾರ್**

ಪೀಠಾಧಿಕಾರಿ-2 (ಪ್ರಭಾರ), ಕಾರ್ಮಿಕ ಇಲಾಖೆ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ**

**ವಿಷಯ:** ಸ್ಥಗಿತಗೊಂಡ **ರೂರಲ್ ಇಂಜಿನಿಯರಿಂಗ್ ಕಾಲೇಜ ನೌಕರರ ಗ್ರಾಹಕರ ಸಹಕಾರ ಸಂಘ ನಿ., ಭಾಲ್ಕಿ** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72 (2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: / ಸನಿಬಿ 1 / ವಿ6 / ಸಮಾಪನೆ / ಸಿಆರ್- / 2005-2006 / 2293 / ದಿನಾಂಕ: 08.11.2005.

2) ವಾರ್ತಾ ಪತ್ರಿಕೆಯಲ್ಲಿ ಪ್ರಕಟಣೆ ದಿನಾಂಕ :

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ರವರು ನೊಂದಣಿ ಸಂಖ್ಯೆ / ಎಆರ್ 1/ 9397 / 1983-84 / ದಿನಾಂಕ: 04.08.1983 ರಲ್ಲಿ ನೊಂದಣಿ **ರೂರಲ್ ಇಂಜಿನಿಯರಿಂಗ್ ಕಾಲೇಜ ನೌಕರರ ಗ್ರಾಹಕರ ಸಹಕಾರ ಸಂಘ ನಿ, ಭಾಲ್ಕಿ** ಈ ಸಂಘವು ಸುಮಾರು ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1) ರ ಮುಖೀನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಉಲ್ಲೇಖ (2) ರನ್ವಯ ಸಂಘದ ಸಮಾಪನೆ : ರದ್ದತಿ ಬಗ್ಗೆ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲಾಗಿ ಯಾರಿಂದಲೂ ಯಾವುದೆ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೆ ರೀತಿಯ ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / 3197, ದಿನಾಂಕ: 22ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 (2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ / 69 / ಸಿಎಲ್‌ಎಂ / 200 / ದಿನಾಂಕ : 21.11.2001 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸ್ಥಗಿತಗೊಂಡ **ರೂರಲ್ ಇಂಜಿನಿಯರಿಂಗ್ ಕಾಲೇಜ ನೌಕರರ ಗ್ರಾಹಕರ ಸಹಕಾರ ಸಂಘ ನಿ, ಭಾಲ್ಕಿ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 73 (1) ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಭಾಲ್ಕಿ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 74 ಹಾಗೂ ನಿಯಮಗಳು 1960 ರ ನಿಯಮ 33 ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ - ಜವಾಬ್ದಾರಿ ವಿಲೇಗೊಳಿಸಲು ಆದ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೊಂದಣಿ ಸಂಖ್ಯೆ ರದ್ದತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ 22.11.2005 ರಂದು ಹೊರಡಿಸಲಾಗಿದೆ.

ಪಿ.ಆರ್. 1873 ಸಹಕಾರ ಸಂಘಗಳ ಉಪ ನಿಬಂಧಕರು

ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸ್ಥಗಿತಗೊಂಡ **ಹರಿಜನ / ಗಿರಿಜನ ಹಿಂದುಳಿದ ವರ್ಗಗಳ ವಿವಿದೋದ್ದೇಶ ಸಹಕಾರ ಸಂಘ ನಿ., ಬಸವಕಲ್ಯಾಣ** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72 (2) ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: / ಸನಿಬಿ 1 / ವಿ6 / ಸಮಾಪನೆ / ಸಿಆರ್- / 2005-2006 / 2224 / ದಿನಾಂಕ:

2) ವಾರ್ತಾ ಪತ್ರಿಕೆಯಲ್ಲಿ ಪ್ರಕಟಣೆ ದಿನಾಂಕ :

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ರವರು ನೊಂದಣಿ ಸಂಖ್ಯೆ ಸನಿಬಿ 1/ ವಿ4 / 18354 / 1995-96 / ದಿನಾಂಕ: 06.08.1996 ರಲ್ಲಿ ನೊಂದಣಿ **ಹರಿಜನ / ಗಿರಿಜನ ಹಿಂದುಳಿದ ವರ್ಗಗಳ ವಿವಿದೋದ್ದೇಶ ಸಹಕಾರ ಸಂಘ ನಿ, ಬಸವಕಲ್ಯಾಣ** ಈ ಸಂಘವು ಸುಮಾರು ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1) ರ ಮುಖೀನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಉಲ್ಲೇಖ (2) ರನ್ವಯ ಸಂಘದ ಸಮಾಪನೆ : ರದ್ಧತಿ ಬಗ್ಗೆ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲಾಗಿ ಯಾರಿಂದಲೂ ಯಾವುದೆ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೆ ರೀತಿಯ ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / 3187, ದಿನಾಂಕ: 22ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 (2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ / 69 / ಸಿಎಲ್ಎಂ / 200 / ದಿನಾಂಕ : 21.11.2001 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸ್ಥಗಿತಗೊಂಡ **ಹರಿಜನ / ಗಿರಿಜನ ಹಿಂದುಳಿದ ವರ್ಗಗಳ ವಿವಿದೋದ್ದೇಶ ಸಹಕಾರ ಸಂಘ ನಿ, ಬಸವಕಲ್ಯಾಣ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 73 (1) ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಹುಮನಾಬಾದ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 74 ಹಾಗೂ ನಿಯಮಗಳು 1960 ರ ನಿಯಮ 33 ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ - ಜವಾಬ್ದಾರಿ ವಿಲೇಗೊಳಿಸಲು ಆದ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೊಂದಣಿ ಸಂಖ್ಯೆ ರದ್ದತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ 22.11.2005 ರಂದು ಹೊರಡಿಸಲಾಗಿದೆ.

ಪಿ.ಆರ್. 1874 ಸಹಕಾರ ಸಂಘಗಳ ಉಪ ನಿಬಂಧಕರು

ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸ್ಥಗಿತಗೊಂಡ **ಪ:ಜಾ / ಪ:ಪಂ ಕಮ್ಯೂನಿಟಿ ನೀರಾವರಿ ಸಹಕಾರ ಸಂಘ ನಿ., ರುದನೂರ ತಾ: ಭಾಲ್ಕಿ** ಇದನ್ನು ಸಹಕಾರ ಕಾಯ್ದೆ 1959ರ ಕಲಂ 72 (2) ರನ್ವಯ ಸಮಾಪನೆ ಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ: / ಸನಿಬಿ 1 / ವಿ6 / ಸಮಾಪನೆ / ಸಿಆರ್- / 2005-2006 / 2291 / ದಿನಾಂಕ: 08.11.2005.

2) ವಾರ್ತಾ ಪತ್ರಿಕೆಯಲ್ಲಿ ಪ್ರಕಟಣೆ ದಿನಾಂಕ :

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ರವರು ನೊಂದಣಿ ಸಂಖ್ಯೆ ಎಆರ್1/ ಎಸ್.9 / ಆರ್. ಎನ್ / 11357 / 1986-87 / ದಿನಾಂಕ: 11.06.1986 ರಲ್ಲಿ ನೊಂದಣಿ **ಪ:ಜಾ / ಪ:ಪಂ ಕಮ್ಯೂನಿಟಿ ನೀರಾವರಿ ಸಹಕಾರ ಸಂಘ ನಿ., ರುದನೂರ ತಾ: ಭಾಲ್ಕಿ** ಈ ಸಂಘವು ಸುಮಾರು ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1) ರ ಮುಖೀನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ ಹಾಗೂ ಉಲ್ಲೇಖ (2) ರನ್ವಯ ಸಂಘದ ಸಮಾಪನೆ : ರದ್ಧತಿ ಬಗ್ಗೆ ದಿನ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲಾಗಿ ಯಾರಿಂದಲೂ ಯಾವುದೆ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೆಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೆ ರೀತಿಯ ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತನಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / 3204, ದಿನಾಂಕ: 22ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 (2) ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ / 69 / ಸಿಎಲ್ಎಂ / 200 / ದಿನಾಂಕ : 21.11.2001 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸ್ಥಗಿತಗೊಂಡ **ಪ:ಜಾ / ಪ:ಪಂ ಕಮ್ಯೂನಿಟಿ ನೀರಾವರಿ ಸಹಕಾರ ಸಂಘ ನಿ., ರುದನೂರ ತಾ: ಭಾಲ್ಕಿ** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 73 (1) ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಭಾಲ್ಕಿ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 74 ಹಾಗೂ ನಿಯಮಗಳು 1960 ರ ನಿಯಮ 33 ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ - ಜವಾಬ್ದಾರಿ ವಿಲೇಗೊಳಿಸಲು ಆದ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೆಗೊಳಿಸಿ ನೊಂದಣಿ ಸಂಖ್ಯೆ ರದ್ದತಿಗಾಗಿ ಈ ಆದೇಶದ 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ 22.11.2005 ರಂದು ಹೊರಡಿಸಲಾಗಿದೆ.

ಪಿ.ಆರ್. 1875 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸಮಾಪನೆಗೊಂಡ **ಹರಿಜನ / ಗಿರಿಜನ ಚಿಕ್ಕ ಅತಿ ಚಿಕ್ಕ ನೀರಾವರಿ ಸಹಕಾರ ಸಂಘ ನಿಯಮಿತ, ಸಿಕೀಂದ್ರಾಬಾದವಾಡಿ ತಾ: ಭಾಲ್ಕಿ** ಇದರ ನೊಂದಣಿ ಸಂಖ್ಯೆ ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / ದಿನಾಂಕ: 25.10.1999.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ / ಸನಿಬಿ1 / ವಿ6 / ಸಮಾಪನೆ / 2005-2006 / ದಿನಾಂಕ: 29.10.2005.

**ಪ್ರಸ್ತಾವನೆ:**

ಲೇದರ ಟ್ಯಾನರ್ಸ್ ಸಹಕಾರ ಸಂಘ ನಿ., ಲಾಲವಾಡಿ, ಬೀದರ ಈ ಸಂಘವು ಸಂಖ್ಯೆ / ಎಸ್ಎಕ್ಸ್ / ಎಆರ್ಎಸ್ಆರ್ / 1985-86 / 1134/ ದಿನಾಂಕ: 24.3.1985 ರಲ್ಲಿ ನೊಂದಣೆಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1) ರ ಆದೇಶದಲ್ಲಿ ಸಮಾಪನೆಗೊಳಿಸಿ **ಸಹಕಾರ ಅಭಿವೃದ್ಧಿ ಅಧಿಕಾರಿ, ಭಾಲ್ಕಿ** ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೊಂದಣಿ ಸಂಖ್ಯೆ ರದ್ದು ಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಮೂಲಕ ಉಲ್ಲೇಖ (2) ರ ಮುಖೇನ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರು ಸಂಘದಲ್ಲಿ ಯಾವುದೆ ಆಸ್ತಿ - ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೆ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದವರು ನೊಂದಣೆ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / 3212, ದಿನಾಂಕ: 22ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ / 69 / ಸಿಎಲ್ಎಂ / 200 / ದಿನಾಂಕ : 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸಮಾಪನೆಗೊಂಡ **ಹರಿಜನ / ಗಿರಿಜನ ಚಿಕ್ಕ ಅತಿ ಚಿಕ್ಕ ನೀರಾವರಿ ಸಹಕಾರ ಸಂಘ ನಿಯಮಿತ, ಸಿಕೀಂದ್ರಾಬಾದವಾಡಿ ತಾ: ಭಾಲ್ಕಿ** ಇದರ ನೊಂದಣಿ ಸಂಖ್ಯೆ / ಎಸ್ಎಕ್ಸ್ / ಎಆರ್ಎಸ್ಆರ್/ 1985-86 / 1134 / ದಿನಾಂಕ: 24.3.1985 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ 22.11.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 1876 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸಮಾಪನೆಗೊಂಡ **ಹರಿಜನ / ಗಿರಿಜನ ಏತ ನೀರಾವರಿ ಸಹಕಾರ ಸಂಘ ನಿಯಮಿತ, ಎಣಕೂರ ತಾ: ಭಾಲ್ಕಿ** ಇದರ ನೊಂದಣಿ ಸಂಖ್ಯೆ ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / ದಿನಾಂಕ: 25.10.1999.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ / ಸನಿಬಿ1 / ವಿ6 / ಸಮಾಪನೆ / 2005-2006 / ದಿನಾಂಕ: 29.10.2005.

**ಪ್ರಸ್ತಾವನೆ:**

ಲೇದರ ಟ್ಯಾನರ್ಸ್ ಸಹಕಾರ ಸಂಘ ನಿ., ಲಾಲವಾಡಿ, ಬೀದರ ಈ ಸಂಘವು ಸಂಖ್ಯೆ / ಎಸ್.ಎಸ್.ಎ/ ಆರ್ಎಸ್ಆರ್ / 1985-86 / 11339/ ದಿನಾಂಕ: 12.3.1986 ರಲ್ಲಿ ನೊಂದಣೆಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1) ರ ಆದೇಶದಲ್ಲಿ ಸಮಾಪನೆಗೊಳಿಸಿ **ಸಹಕಾರ ಅಭಿವೃದ್ಧಿ ಅಧಿಕಾರಿ, ಭಾಲ್ಕಿ** ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೊಂದಣಿ ಸಂಖ್ಯೆ ರದ್ದು ಪಡಿಸಲು ಸಹಕಾರ

ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಮೂಲಕ ಉಲ್ಲೇಖ (2) ರ ಮುಖೇನ ಪ್ರಸ್ತಾವನೆ ಸಲ್ಲಿಸುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರು ಸಂಘದಲ್ಲಿ ಯಾವುದೆ ಆಸ್ತಿ - ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೆ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದ ನೊಂದಣಿ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಆಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / 3218, ದಿನಾಂಕ: 22ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ / 69 / ಸಿಎಲ್ಎಂ / 200 / ದಿನಾಂಕ : 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸಮಾಪನೆಗೊಂಡ **ಹರಿಜನ / ಗಿರಿಜನ ಏತ ನೀರಾವರಿ ಸಹಕಾರ ಸಂಘ ನಿಯಮಿತ, ಎಣಕೂರ ತಾ: ಭಾಲ್ಕಿ** ಇದರ ನೊಂದಣಿ ಸಂಖ್ಯೆ / ಎಸ್ಎಸ್ಎ/ ಆರ್ಎಸ್ಆರ್/ 1985-86 / 11339 / ದಿನಾಂಕ: 12.3.1986 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ 22.11.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 1877 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸಮಾಪನೆಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಮುಧೋಳ (ಬಿ) ತಾ: ಔರಾದ (ಬಿ)** ಇದರ ನೊಂದಣಿ ಸಂಖ್ಯೆ ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / ದಿನಾಂಕ: 25.10.1999.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಉಪ ವಿಭಾಗ, ಬೀದರ ಇವರ ಪತ್ರ ಸಂಖ್ಯೆ / ಸನಿಬಿ1 / ವಿ6 / ಸಮಾಪನೆ / 2005-2006 / ದಿನಾಂಕ: 29.10.2005.

**ಪ್ರಸ್ತಾವನೆ:**

ಲೇದರ ಟ್ಯಾನರ್ಸ್ ಸಹಕಾರ ಸಂಘ ನಿ., ಲಾಲವಾಡಿ, ಬೀದರ ಈ ಸಂಘವು ಸಂಖ್ಯೆ / ಎಆರ್1/ ಎಸ್.4/ ಹೆಚ್ಓಟಿ/ 18339 / 1994-95 / ದಿನಾಂಕ: 07.12.1995 ರಲ್ಲಿ ನೊಂದಣಿಯಾಗಿರುತ್ತದೆ. ಸಂಘದ ಕಾರ್ಯ ಚಟುವಟಿಕೆಗಳು ಪೂರ್ಣ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1) ರ ಆದೇಶದಲ್ಲಿ ಸಮಾಪನೆಗೊಳಿಸಿ **ಸಹಕಾರ ಅಭಿವೃದ್ಧಿ ಅಧಿಕಾರಿ, ಭಾಲ್ಕಿ** ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ನೊಂದಣಿ ಸಂಖ್ಯೆ ರದ್ದು ಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಮೂಲಕ ಉಲ್ಲೇಖ (2) ರ ಮುಖೇನ ಪ್ರಸ್ತಾವನೆ ಸಲ್ಲಿಸುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರು ಸಂಘದಲ್ಲಿ ಯಾವುದೆ ಆಸ್ತಿ - ಜವಾಬ್ದಾರಿ ಇರುವುದಿಲ್ಲ ಮತ್ತು ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಯಾವುದೆ ಬಾಕಿ ಇಲ್ಲವೆಂದು ಪ್ರಮಾಣ ಪತ್ರ ನೀಡಿರುತ್ತಾರೆ. ಹಾಗೂ ಸಂಘದ ಹೆಸರಿನಲ್ಲಿ ಇರುವ ಶಿಲ್ಕು ಹಣವನ್ನು ಉಪ ನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ ಸಂಘದ ನೊಂದಣಿ ಸಂಖ್ಯೆ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಆಂಶಗಳನ್ನು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ / ಉನಿಬಿ / ವಿ2 / ಸಮಾಪನೆ / ಸಿಆರ್- / 2005-2006 / 3219, ದಿನಾಂಕ: 22ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ / 69 / ಸಿಎಲ್ಎಂ / 200 / ದಿನಾಂಕ : 21.11.2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ. ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ ಜಿಲ್ಲೆ ಬೀದರ ಆದ ನಾನು ಸಮಾಪನೆಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಮುಧೋಳ (ಬಿ) ತಾ: ಔರಾದ (ಬಿ)** ಇದರ ನೊಂದಣಿ ಸಂಖ್ಯೆ / ಎಆರ್1/ ಎಸ್.4/ ಹೆಚ್ಓಟಿ/ 18339/ 1994-95/ ದಿನಾಂಕ: 07.12.1995 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಾಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ 22.11.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 1878 ಸಹಕಾರ ಸಂಘಗಳ ಉಪ ನಿಬಂಧಕರು

ಬೀದರ.

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE**

**No: LDB - 2 / 23 / DEB / 2005-06, Dated: 23rd June 2005**

Sub : Floatation of Special Development Debentures by the KSCA&RD Bank under various schemes for Rs.8,31,90,600/- issue of orders-reg.

Ref : (1) Proposal No:FS/DEB/93/2005-06 Dated: 14-6-2005 of the KSCA&RD Bank Ltd., Bangalore addressed to NABARD, Bangalore forwarding the proposal for Floatation of Special Development Debentures for Rs. 8,31,90,600/- for their approval.

(2) Letter No: NB(BL) / ICD / 3206 / LDB-12 / 2005-06 Dated:18-6-2005 of the NABARD, Bangalore addressed to the Managing Director, KSCA&RD Bank, under

copy to the Registrar of Co-operative Societies in Karnataka, Bangalore conveying their approval to the proposal cited above at 1, for Rs. 8,31,90,600/-

(3) Government O.M. No. FD. 95. RLG; 68 Dated: 11-11-1971

(4) Letter No. CMW: 192 : CLS 1998, Bangalore Dated:16-6-1999 sanctioning the Government Guarantee for Rs.1442.00 crores on behalf of the KSCA&RD Bank for the years 1999-2000 to 2001-02.

(5) Govt., letter No. FD 159 INV 2005 Dated:9-5-2005 extending the period of the guarantee up to 31-3-2006 for Rs.1325 crores.

(6) Proposal No. FS/DEB/113/2005-06, Dated: 21-6-2005 of the KSCA & RD Bank, addressed to this office requesting to issue of orders for the floatation of the debentures approved by the NABARD as cited in Ref.2 above.

**PREAMBLE:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs. 8,31,90,600/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter cited above at (2) has conveyed their approval for the floatation and agreed to subscribe to Special Development Debentures floated by the bank to the extent of Rs.7,57,39,400/-. The contribution from State Government and Central Government is to the extent of Rs.37,25,600/- each. Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government guarantee on behalf of the Karnataka State Co-operative Agriculture and Rural Development Bank for the years 1999-2000 to 2001-2002, Government has authorised the Registrar of Co-operative Societies to issue order etc., up to Rs.10.00 crore on each occasion, and to make the contribution to the debentures according to the pattern approved by the NABARD. The Govt. has further extended the period of said guarantee up to 31-3-2006 vide Government letter cited (5) above. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) to (5) are to be followed. The Karnataka State Co-operative Agriculture and Rural Development Bank, in its letter cited at (6) has requested this office for issue of order for floatation of debentures as approved by the National Bank for Agriculture and Rural Development vide reference cited above at (2).

## ORDER

1) Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore to float Special Development Debentures to the extent of Rs. 8,31,90,600/- (Rupees EightCrores Thirtyone Lakhs Ninety Thousand Six hundred Only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the ANNEXURE-1 to this order.
2) Sanction is hereby accorded to contribute a sum of Rs. 37,25,600/- (Rupees. Thirtyseven Lakhs Twentyfive Thousand Six Hundred Only) being the State Government share of contribution to the various Special Development Debentures to be floated by the Karnataka State Co-operative Agriculture and Rural Development Bank Ltd., Bangalore as approved by the National Bank for Agriculture and Rural Development vide their letter cited above at (2).
3) The currency for floating these debentures would be up to 31-7-2005.
4) General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of Co-operative Societies (ADM &DEV), Head Office, Bangalore.

The expenditure of Rs. 37,25,600/- (Rupees Thirtyseven Lakhs Twentyfive Thousand Six Hundred Only) in this behalf towards Government contribution may be met under the budget Head "6416-Loans for Agricultural Financial Institutions –190 Loans to public sector and other undertakings –1 Karnataka State Co-operative Agriculture and Rural Development Bank-01 Loans for purchase of debentures." (6416-00-190-1-01)

P.R. 1879

Registrar of Co-operative Societies,
in Karnataka, Bangalore.

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು**

**ವಿಷಯ:** ಶಿವಮೊಗ್ಗ ತಾಲ್ಲೂಕು ಕುಕ್ಕುಟ ಪಾಲಕರ ಸಹಕಾರ ಸಂಘ (ನಿ) ಶಿವಮೊಗ್ಗ, ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ಪತ್ರ ಸಂಖ್ಯೆ: ಡಿಆರ್‌ಎಸ್/ ಸಮಾಪನೆ / ಡಿಎಲ್‌ಎಸ್/ 431 / 04-05, ದಿನಾಂಕ: 22.12.2004.

2) ಈ ಕಛೇರಿ ಪತ್ರದ ಸಮ ಸಂಖ್ಯೆ : ದಿನಾಂಕ: 31.1.2005.

**ಪ್ರಸ್ತಾವನೆ:**

ಶಿವಮೊಗ್ಗ ತಾಲ್ಲೂಕು ಕುಕ್ಕುಟ ಪಾಲಕರ ಸಹಕಾರ ಸಂಘ ನಿಯಮಿತ, ಶಿವಮೊಗ್ಗ, ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಡಿಆರ್‌ಎಸ್/ ಎಡಿಎಂ/ ನೋಂದಣಿ / 2046 / 97-98, ದಿನಾಂಕ: 24.2.1998 ರನ್ವಯ ನೋಂದಾಯಿತವಾಗಿದ್ದು, ಶಿವಮೊಗ್ಗ ತಾಲ್ಲೂಕಿನ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ. ಈ ಸಹಕಾರ ಸಂಘವು ನೋಂದಣಿಯಾದಾಗಿನಿಂದ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದೆಯೆಂದೂ, ಸಂಘದ ವಾರ್ಷಿಕ ಮಹಾಸಭೆ, ಮಾಸಿಕ ಕಾರ್ಯಕಾರಿ ಮಂಡಳಿ ಸಭೆಗಳು ನಿಯತಕಾಲಿಕವಾಗಿ ನಡೆಸಲಾಗುತ್ತಿಲ್ಲವೆಂದು, ಸಂಘದ ಕಾರ್ಯಚಟುವಟಿಕೆಗಳ ಬಗ್ಗೆ ಆಡಳಿತ ಮಂಡಳಿ ಸದಸ್ಯರಿಗಾಗಲೀ, ಸಂಘದ ಸದಸ್ಯರಿಗಾಗಲೀ ಯಾವುದೇ ಆಸಕ್ತಿ ಇಲ್ಲದ ಕಾರಣ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72(2) ರನ್ವಯ ಸಮಾಪನೆಗೊಳಿಸಬೇಕೆಂದು ಉಲ್ಲೇಖ () ರ ಪತ್ರದಲ್ಲಿ ಉಪನಿಬಂಧಕರು, ಶಿವಮೊಗ್ಗರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿನ ಆರೋಪಗಳಿಗೆ ಸಂಘದ ಆಡಳಿತ ಮಂಡಳಿ ಸದಸ್ಯರ ಆಕ್ಷೇಪಗಳೇನಾದರೂ ಇದ್ದಲ್ಲಿ ಉಲ್ಲೇಖ (2) ರ ಪತ್ರವನ್ನು ಸದರಿಯವರು ಸ್ವೀಕರಿಸಿದ 15 (ಹದಿನೈದು) ದಿನಗಳೊಳಗೆ ಉತ್ತರ ನೀಡಲು ನೋಟೀಸನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗರವರ ಮೂಲಕ ಜಾರಿ ಮಾಡಲಾಗಿರುತ್ತದೆ.

ಸದರಿ ಸ್ವೀಕೃತಿಯನ್ನು ಪರಿಶೀಲಿಸಲಾಗಿ ಒಟ್ಟು ಒಂಭತ್ತು ಜನರ ಆಡಳಿತ ಮಂಡಳಿ ಸದಸ್ಯರುಗಳ ಪೈಕಿ ಆರು ಜನ ಪಡೆದಿರುತ್ತಾರೆ. ಉಳಿದ ಎರಡು ಜನರು ನಿರಾಕರಿಸಿದ್ದು, ನೋಟೀಸಿನ ಜಾರಿಗಾರರು ಅವರ ಮನೆಯ ಮುಂಬಾಗಿಲಿಗೆ ಅಂಟಿಸಿರುವುದಾಗಿ ತಿಳಿಸಿರುತ್ತಾರೆ. ಸದರಿಯವರು ಸಂಘದ ಸಮಾಪನೆಗೆ ಲಿಖಿತ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಸದರಿ ವಿಷಯದಲ್ಲಿ ಇವರ ಆಕ್ಷೇಪಣೆಗಳು ಏನೂ ಇಲ್ಲವೆಂದು ಭಾವಿಸಿರುತ್ತದೆ ಹಾಗೂ ನೋಟೀಸಿನಲ್ಲಿ ತಿಳಿಸಿರುವ ನ್ಯೂನತೆಗಳು ಆರೋಪಗಳು ನಿಜವೆಂದು ಒಪ್ಪಿ, ಸಮಾಪನೆಗೊಳಿಸುವುದಕ್ಕೆ ಇವರ ಒಪ್ಪಿಗೆ ಇರುವುದರಿಂದ ಹಾಗೂ ಮೇಲ್ಕಂಡ ಸಂದರ್ಭಗಳಲ್ಲಿ ತಿಳಿಸಿರುವ ಕಾರಣಗಳ ಪ್ರಕಾರ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಪರಿಗಣಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಜೆಆರ್‌ಬಿ : ಎಲ್‌ಕ್ಯೂಡಿ : 34 : ಎಲ್‌ಎಂಸಿ : 2004-05, ದಿನಾಂಕ: 24ನೇ ನವೆಂಬರ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 79 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ/ 69/ ಸಿಎಲ್‌ಎಂ/ 2001, ದಿ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಶಿವಮೊಗ್ಗ ತಾಲ್ಲೂಕು ಕುಕ್ಕುಟ ಪಾಲಕರ ಸಹಕಾರ ಸಂಘ ನಿಯಮಿತ, ಶಿವಮೊಗ್ಗ, ಈ ಸಹಕಾರ ಸಂಘವನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ, ಕಲಂ 73 ರನ್ವಯ ಮಾರಾಟಾಧಿಕಾರಿ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು ಸಂಘದ ಆಸ್ತಿ - ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೇಗೊಳಿಸಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಈ ಆದೇಶದ ದಿನಾಂಕದಿಂದ 90 (ತೊಂಭತ್ತು) ದಿನಗಳೊಳಗಾಗಿ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ 24ನೇ ನವೆಂಬರ್ 2005 ರಂದು ಹೊರಡಿಸಲಾಗಿದೆ.

ಪಿ.ಆರ್. 1880

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ನಗರಾಭಿವೃದ್ಧಿ ಇಲಾಖೆ**

**ಅಧಿಸೂಚನೆ ಸಂಖ್ಯೆ: ನಅಇ 367 ಮೈಅಪ್ರಾ 2005, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2005**

ಚಾಮರಾಜನಗರ - ರಾಮಸಮುದ್ರ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪಕಾಭಿವೃದ್ಧಿ ಯೋಜನೆಯನ್ನು ಮಾಸ್ಟರ್ ಪ್ಲಾನ್ ಪರಿಷ್ಕೃತ - 1 ಎಂದು ಪರಿಗಣಿಸಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ, 2004 ರ ಕಲಂ 13(ಡಿ) ರನ್ವಯ ತಾತ್ಕಾಲಿಕ ಅನುಮೋದನೆ ನೀಡಿ ದಿನಾಂಕ: 29.7.2005 ರಂದು ಹೊರಡಿಸಿರುವ ಅಧಿಸೂಚನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1881

**ಎನ್.ವೈ. ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ನಗರಾಭಿವೃದ್ಧಿ ಇಲಾಖೆ**

**ಅಧಿಸೂಚನೆ ಸಂಖ್ಯೆ: ನಅಇ 89 ಗುಅಪ್ರಾ 2005, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2005**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 (1962ರ ಕರ್ನಾಟಕ ಅಧಿನಿಯಮ 11) ಕಲಂ 5 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮಾನ್ವಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಪ್ರದೇಶಗಳ ಹಾಲಿ ಭೂ ಉಪಯೋಗ ಗುರುತಿಸಲು ದಿನಾಂಕ: 15.8.2005 ರಂದು ಜಾರಿಗೆ ಬರುವಂತೆ ನಿರ್ಧರಿಸಿ ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1882

**ಎನ್.ವೈ. ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ : ಎಫ್ : ಎಸ್ಆರ್ - 44 : 2005, ದಿನಾಂಕ: 24ನೇ ನವೆಂಬರ್ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

ಅರ್ಜಿದಾರರು:
1) ಕಾಂತಮ್ಮ ಕೋಂ ಲೇಟ್ ಬಸವೇಗೌಡ
 : ಅ : ಡ್ರೈವರ್ ಸ್ವಾಮಿ,
2) ಗಂಗಾಧರ ಬಿನ್ ಬಸವೇಗೌಡ, (ಲೇಟ್)
3) ಪದ್ಮಾಕ್ಷಿ ಬಿನ್ ಲೇಟ್ ಬಸವೇಗೌಡ,
 ಬಿ. ಹೊನ್ನೇನಹಳ್ಳಿ ಗ್ರಾಮ, ಬಾಗೂರು
 ಹೋಬಳಿ, ಚನ್ನರಾಯಪಟ್ಟಣ ತಾಲ್ಲೂಕು,
 ಹಾಸನ ಜಿಲ್ಲೆ.

ಪ್ರತಿವಾದಿಗಳು:
1) ಎನ್.ಜಿ. ನಾಗರಾಜು ಬಿನ್ ಗುರಪ್ಪ,
 ವೆಂಕಟೇಶ್ವರ ಲಾಡ್ಜ್ ಮತ್ತು ರೆಸ್ಟೋರೆಂಟ್,
 ಚಿಕ್ಕನಾಯಕನಹಳ್ಳಿ, ತಿಪಟೂರು ತಾಲ್ಲೂಕು.
2) ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ.,
 ಜಯದೇವ ಹಾಸ್ಟೆಲ್ ಬಿಲ್ಡಿಂಗ್,
 ಬಿ.ಹೆಚ್. ರಸ್ತೆ, ತಿಪಟೂರು.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬಸವೇಗೌಡ : ಅ : ಡ್ರೈವರ್ ಸ್ವಾಮಿ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 28.06.2005 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್. 1883

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ : ಎಫ್ : ಎಸ್ಆರ್ - 43 : 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

ಅರ್ಜಿದಾರರು:
1) ಶ್ರೀ ಹೆಚ್.ಸಿ. ಸಣ್ಣಮಂಜೇಗೌಡ
2) ಶ್ರೀಮತಿ ಶಾಂತಮ್ಮ ಕೋಂ
 ಸಣ್ಣಮಂಜೇಗೌಡ, ಅಟ್ಟಾವರ
 ಹೊಸಹಳ್ಳಿ ಗ್ರಾಮ, ದುದ್ದ ಹೊ :
 ಹಾಸನ ತಾಲ್ಲೂಕು.

ಪ್ರತಿವಾದಿಗಳು:
1) ಬಿ.ಆರ್. ಮಧುಪಟೇಲ್,
 ಬಿನ್ ರಾಜು, ಆಶೀರ್ವಾದ,
 ಆದಿಚುಂಚನಗಿರಿ ಮಹಿಳಾ ಸಮಾಜದ
 ಎದುರು, ರವೀಂದ್ರನಗರ, ಹಾಸನ.
2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
 ಹೇಮಾ ಮ್ಯಾನ್‌ಷನ್, ಗಾಂಧಿ ಬಜಾರ್, ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಚನ್ನೇಗೌಡ : ಉ : ದಿನೇಶ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 13.07.2004 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್. 1884

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ: ಡಬ್ಲ್ಯೂಸಿಎ : ಎಫ್ : ಎಸ್ಆರ್ - 42 : 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು :**

ಅರ್ಜಿದಾರರು:
1) ಶ್ರೀಮತಿ ಶಿವಮ್ಮ ಕೋಂ
 ಚಿಕ್ಕೇಗೌಡ : ಉ : ಐಯಣ್ಣ
2) ಶೀಲಾ ಬಿನ್ ಲೇಟ್ ಚಿಕ್ಕೇಗೌಡ
 : ಉ : ಐಯಣ್ಣ
3) ನಪಿತಾ ಬಿನ್ ಲೇಟ್ ಚಿಕ್ಕೇಗೌಡ
 : ಉ : ಅಯ್ಯಣ್ಣ

ಪ್ರತಿವಾದಿಗಳು:
1) ಶ್ರೀ ಬಿ.ಆರ್. ಮಧು ಪಟೇಲ್,
 ಬಿನ್ ರಾಜು,
 ಆಶೀರ್ವಾದ, ಆದಿಚುಂಚನಗಿರಿ
 ಮಹಿಳಾ ಸಮಾಜದ ಎದುರು,
 ರವೀಂದ್ರನಗರ, ಹಾಸನ.

ಅಟ್ಟಾವರ ಹೊಸಹಳ್ಳಿ ಗ್ರಾಮ,
ದುದ್ದ ಹೋಬಳಿ,
ಹಾಸನ ತಾಲ್ಲೂಕು.

2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
ಹೇಮಾ ಮ್ಯಾನ್‌ಷನ್,
ಗಾಂಧಿ ಬಜಾರ್, ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಚಿಕ್ಕೇಗೌಡ : ಉ : ಐಯ್ಯಣ್ಣ ರವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 13.07.2004 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ಮೇಲೆ ನಿಗಧಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

ಪಿ.ಆರ್. 1885

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಚಿಕ್ಕಮಗಳೂರು ಜಿಲ್ಲೆ.**

**ಸಂಖ್ಯೆ: ಕಾಪಕಾ : ಎಫ್ : 4 / 2004, ದಿನಾಂಕ: 24ನೇ ನವೆಂಬರ್ 2005**

**ಅರ್ಜಿದಾರರು :**
1) ಲಕ್ಕೆಗೌಡ s/o ರಂಗೇಗೌಡ
2) ಶ್ರೀಮತಿ ನಾಗಮ್ಮ ಕೋಂ ಲಕ್ಕೇಗೌಡ
ವ್ಯವಸಾಯಗಾರರು,
ವಾಸ : ಹನುಮನಹಳ್ಳಿ
ಮರ್ಲೆ ಅಂಚೆ, ಚಿಕ್ಕಮಗಳೂರು.

**ವಿರುದ್ಧ**

**ಪ್ರತಿವಾದಿಗಳು :**
1) ಆನಂದ ಇಂಡಸ್ಟ್ರೀಸ್ ಫ್ಯಾಕ್ಟರಿ ಮಳಿಗೆ,
ನಂ. 69, ದರ್ಬಾರ್ ಬಿಲ್ಡಿಂಗ್,
ಇಂಡಸ್ಟ್ರೀಯಲ್ ಎಸ್ಟೇಟ್,
ಪೀಣ್ಯ 2ನೇ ಸ್ಟೇಜ್, ಬೆಂಗಳೂರು.

**ಪ್ರಕಟಣೆ**

ಗಂಗೇಗೌಡ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 19.5.1998 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಅದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-1, ಚಿಕ್ಕಮಗಳೂರು.

ಪಿ.ಆರ್. 1886

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ : 14 : ಚುನಾವ : 2005, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2005**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯ್ದೆ 1966ರ ಪ್ರಕರಣ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಬಳ್ಳಾರಿ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1 | ಬಳ್ಳಾರಿ | ಶ್ರೀ ಸೊಪ್ಪಿನ ಬಾಳಪ್ಪ,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಹಡಗಲಿ. |

**ಸೈಯದ್ ಜಮೀರ್ ಪಾಷಾ**
ಆಯುಕ್ತರು ಹಾಗೂ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

ಪಿ.ಆರ್. 1887

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡವಳಿ**

**ಉಪಸ್ಥಿತರು :** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ,
ಚಿಕ್ಕಮಗಳೂರು.

**ವಿಷಯ:** ಸಿಎನ್‌ಜಿ-221 (ಮೋ : ಕ್ಯಾಬ್) ಇದರ ನೊಂದಣಿ ರದ್ದು ಪಡಿಸುವ ಬಗ್ಗೆ.

**ಉಲ್ಲೇಖ:** ಮಾಲೀಕರು ಶ್ರೀ ಕುನ್ನಿ ಅಹ್ಮದ್, ವಸ್ತಾರೆ, ಚಿಮ ಇವರ ಅರ್ಜಿ ದಿನಾಂಕ : 4.3.91.
2) ಅಧ್ಯರ್ಪಣ ಸಂ : 78 : 85-86, ದಿ : 14.3.86.
3) ಮೋಟಾರು ವಾಹನ ನಿರೀಕ್ಷಕರ ವರದಿ, ದಿ: 16.1.95.

ಈ ಕಛೇರಿಯ ದಾಖಲೆಗಳಂತೆ ವಾಹನ ಸಂ: ಸಿಎನ್‌ಜಿ-221 (ಮೋ : ಕ್ಯಾಬ್) ಇದರ ನೊಂದಾಯಿತ ಮಾಲೀಕರಾದ ಶ್ರೀ ಕುನ್ನಿ ಅಹ್ಮದ್, ವಸ್ತಾರೆ, ಚಿಮ ರವರು ಸದರಿ ವಾಹನದ ತೆರಿಗೆಯನ್ನು 31.12.83 ರವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತಿಯನ್ನು ಪಡೆಯಲು ಸದರಿ ವಾಹನದ ಅನುಪಯೋಗದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆಗಳನ್ನು ಅಧ್ಯರ್ಪಣ ಸಂ: 78 : 85-86 ರಲ್ಲಿ ದಿ: 14.3.86 ರಿಂದ ಅಧ್ಯರ್ಪಣ ಮಾಡಿದ್ದು, ಇಂದಿಗೂ ಅಧ್ಯರ್ಪಣ ಮುಂದುವರೆದಿದೆ.

ಕಛೇರಿಗೆ ದಿ: 04.03.91 ರಂದು ಅರ್ಜಿ ಸಲ್ಲಿಸಿ ಈ ವಾಹನವು 1980 ರ ಮಾಡೆಲ್ ಆಗಿದ್ದು ರಸ್ತೆಯಲ್ಲಿ ಓಡಿಸಲು ಅನರ್ಹವಿರುವುದಾಗಿ ಮಾಹಿತಿ ನೀಡಿ ನೊಂದಣಿ ರದ್ದು ಪಡಿಸಲು ಕೋರಿರುತ್ತಾರೆ. ಪೂರಕವಾಗಿ ಈ ಕಛೇರಿಯಿಂದ ಮೋಟಾರು ವಾಹನ ನಿರೀಕ್ಷಕರವರು ಈ ವಾಹನದ ಸ್ಥಿತಿಗತಿ ಪರಿಶೀಲಿಸಿ ಕಛೇರಿಗೆ ದಿ: 16.01.95 ರಂದು ಸಲ್ಲಿಸಿದ ವರದಿಯಲ್ಲಿ ಈ ವಾಹನದ ನೊಂದಣಿ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ**

**ಸಂ: ಪ್ರಾಸಾಅ : ಚಿಮ : ಎಫ್‌ಟಿ : ಸಾರಿಗೆ : 05-06, ದಿನಾಂಕ: 22ನೇ ನವೆಂಬರ್ 2005.**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂ: ಸಿಎನ್‌ಜಿ-221 (ಮೋ:ಕ್ಯಾಬ್) ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

ವಾಹನದ ವಿವರಗಳು :

1. ವಾಹನ ಸಂ : ಸಿಎನ್‌ಜಿ-221
2. ವರ್ಗ :
3. ಮಾಡೆಲ್ : ಮೋ : ಕ್ಯಾಬ್ : 1980
4. ತಯಾರಿಕೆ : 1980
5. ಚಾಸಿಸ್ ಸಂ : 15364 ಡಿ ಐ
6. ಯಂತ್ರ ಸಂ : ಎಸ್ ಡಿ 10277
7. ತೆರಿಗೆ ಪಾವತಿ : 31.12.83
8. ಹೆಚ್ ಪಿ ಎ : ಇರುವುದಿಲ್ಲ
9. ನೊಂದಣಿ ದಿ : 15.7.80
10. ಎಸ್.ಆರ್. ಸಂ : 78 : 85-86
11. ಮಾಲೀಕರು : ಶ್ರೀ ಕುನ್ನಿ ಅಹ್ಮದ್, ವಸ್ತಾರೆ, ಚಿಕ್ಕಮಗಳೂರು.

**ಆರ್. ರಾಜಶೇಖರ್**
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ
ನೊಂದಣಿ ಪ್ರಾಧಿಕಾರಿ, ಚಿಕ್ಕಮಗಳೂರು.

ಪಿ.ಆರ್. 1907

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು**

**ಕ್ರಮಾಂಕ : ಕಗೃಮಂ / ಭೂಸ್ವಾವಿ.22/ 2003-04, ದಿನಾಂಕ: 23ನೇ ಮೇ 2005.**

ಕರ್ನಾಟಕ ಭೂಸ್ವಾಧೀನ ಕಾಯ್ದೆ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಕಾಯ್ದೆ (ಕೇಂದ್ರ 46) ರಲ್ಲಿ ವಿಧಿತವಾದ ಅಧಿಕಾರದಂತೆ, ಹಾಗೂ ಕರ್ನಾಟಕ ಜನರಲ್ ಕ್ಲಾಸ್ ಆಕ್ಟ್ 1897 (ಆಕ್ಟ್ iii ಆಫ್ 1889 ಕಲಂ 21) ರ ಅನ್ವಯ ಈ ಕಛೇರಿಯಿಂದ ಹೊರಡಿಸಲಾಗಿದ್ದ 4(1) ರ ಅಧಿಸೂಚನೆ ಸಂಖ್ಯೆ: ಕಗೃಮಂ / ಭೂಸ್ವಾವಿ. 22 / 2003-04 ದಿ: 10ನೇ ಮಾರ್ಚ್ 2004 ಅಧಿಸೂಚನೆಯೂ ಕರ್ನಾಟಕ ರಾಜ್ಯ ಪತ್ರದ ಭಾಗ 3 ಪುಟ 733 ರಿಂದ 736 ದಿನಾಂಕ: 22.4.2004 ರಲ್ಲಿನ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ ಬನಹಳ್ಳಿ ಮತ್ತು ಚಂದಾಪುರ ಗ್ರಾಮಕ್ಕೆ ಸಂಬಂಧಪಟ್ಟ ಪ್ರಕಟಣೆಯನ್ನು ಹಿಂತೆಗೆದುಕೊಳ್ಳಲಾಗಿದೆ.

ಪಿ.ಡಿ. 111

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ**

**ನಂ: ಡಿಆರ್ : ಡಿವಿಜಿ : ಸಮಾಪನೆ : ಸಿಆರ್-02 : 1998-99, ದಿನಾಂಕ: 25ನೇ ನವೆಂಬರ್ 2005.**

**ವಿಷಯ:** ಸಮಾಪನೆಗೊಂಡಿರುವ ಆಲೂರು ಸೇವಾ ಸಹಕಾರ ಸಂಘ ನಿ, ಆಲೂರು ಇದರ ನೋಂದಣಿಯ ರದ್ದತಿ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ಸಂ: ಸನಿ31 : ಬಿ : ಸಮಾಪನೆ : ಸಿಆರ್ : 2005-06, ದಿನಾಂಕ: 21.11.2005.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖಿತ ಪತ್ರದೊಂದಿಗೆ ಪ್ರಸ್ತಾವನೆಯನ್ನು ಈ ಕಛೇರಿಗೆ ಸಲ್ಲಿಸಿ ಸಮಾಪನೆಯಲ್ಲಿರುವ ಆಲೂರು ಸೇವಾ ಸಹಕಾರ ಸಂಘ ನಿ, ದಾವಣಗೆರೆ ತಾ: ಇದರ ನೋಂದಣಿಯನ್ನು ರದ್ದು ಪಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಈ ಸಂಘವು ಹೊಂದಿರುವ ಆಸ್ತಿ ವಸೂಲಾತಿಗೆ ಯಾವುದೇ ರಹ ಇಲ್ಲದೇ ಇರುವುದರಿಂದ ಹೊಂದಾಣಿಕೆ ಮೂಲಕ ಜಮಾ ಖರ್ಚು, ಆಸ್ತಿ ಜವಾಬ್ದಾರಿಗಳು ಶೂನ್ಯವೆಂದು ದೃಢಪಟ್ಟಿದ್ದರಿಂದ ಮತ್ತು ಈ ಸಂಘದ ಇರುವಿಕೆಯಿಂದ ಯಾವ ಪ್ರಯೋಜನವೂ ಇಲ್ಲವಾದ್ದರಿಂದ ಇದರ ನೋಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಸದರಿಯವರ ಶಿಫಾರಸ್ಸಿನ ಮೇರೆಗೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಾಣಿಸಿದ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರ ಪ್ರಕರಣ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ 69 : ಸಿಎಲ್ಎಂ : 2001 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಂ. ಆಶಾ ಕೆ.ಸಿ.ಎಸ್ ಆದ ನಾನು ಸಮಾಪನೆಗೊಂಡಿರುವ ಆಲೂರು ಸೇವಾ ಸಹಕಾರ ಸಂಘ ನಿ, ಆಲೂರು ದಾವಣಗೆರೆ ತಾ: ಇದರ ನೋಂದಣಿ ಸಂಖ್ಯೆ ಎಆರ್‌ಸಿ : 1255 : 1943 ದಿನಾಂಕ: 14.02.1943 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆಯೆಂದೂ, ಇದರ ಕಾರ್ಯ ಚಟುವಟಿಕೆಗಳೂ ವಿಸರ್ಜಿತವಾಗಿದೆಯೆಂದೂ ಪರಿಗಣಿಸತಕ್ಕದ್ದು. ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಈ ದಿನ ದಿನಾಂಕ: 25.11.2005 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 1914 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಗೊಂಡ ಹಣ್ಣು ಮತ್ತು ತರಕಾರಿ ಬೆಳೆಗಾರರ ಸಹಕಾರ ಸಂಘ ನಿ. ಹೊಸಕೋಟೆ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ / ಆರ್ / ಎಲ್‌ಕ್ಯೂಡಿ / 53 / 84-85, ದಿ: 24.4.1984.

2) ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸಕೋಟೆ ಇವರ ಪತ್ರ ದಿ: 4.1.2002, 3.2.05 ಮತ್ತು 24.9.05.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ: ಸನಿ 47 / ನೋಂದಣಿ ರದ್ದತಿ / 03-04, ದಿ: 23.8.03.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಕಛೇರಿಯಲ್ಲಿ ಹಣ್ಣು ಮತ್ತು ತರಕಾರಿ ಬೆಳೆಗಾರರ ಸಹಕಾರ ಸಂಘ ನಿ. ಹೊಸಕೋಟೆ ಈ ಸಂಘವು ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2) ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (2) ಮತ್ತು (3) ರ ಸಮಾಪನಾಧಿಕಾರಿಗಳ ಪತ್ರದಲ್ಲಿ ಸದರಿ ಸಂಘದ ನೋಂದಣಿ ರದ್ದುಪಡಿಸಲು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (2) ಮತ್ತು (3) ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಹಣ್ಣು ಮತ್ತು ತರಕಾರಿ ಬೆಳೆಗಾರರ ಸಹಕಾರ ಸಂಘ ನಿ. ಹೊಸಕೋಟೆ, ಹೊಸಕೋಟೆ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

**ನಂ. ಡಿಆರ್‌ಬಿ / ಆರ್ / ಸಮಾಪನೆ / 38 / 2005-2006, ದಿನಾಂಕ: 26ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ-69 / ಸಿಎಲ್ಎಂ / 2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಎಂ. ವೆಂಕಟೇಶಗೌಡ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಹಣ್ಣು ಮತ್ತು ತರಕಾರಿ ಬೆಳೆಗಾರರ ಸಹಕಾರ ಸಂಘ ನಿ. ಹೊಸಕೋಟೆ, ಹೊಸಕೋಟೆ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 26.11.2005 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 1915 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ನಂ: ಡಿಆರ್ : ಡಿವಿಜಿ : ಎಲ್‌ಕ್ಯೂಡಿ : ಸಿಆರ್- 1 : 2005-06, ದಿನಾಂಕ: 25ನೇ ನವೆಂಬರ್ 2005.**

**ವಿಷಯ:** ಸ್ಥಗಿತಗೊಂಡಿರುವ ಚನ್ನಗಿರಿ ಟೌನ್ ಮಹಿಳಾ ವಿವಿದೋದ್ದೇಶ ಮಹಿಳಾ ಸಹಕಾರ ಸಂಘ ನಿ. ಚನ್ನಗಿರಿ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1)ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 6.10.2005.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 26.10.2005.

3) ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ, ಇವರ ಪತ್ರ ದಿನಾಂಕ: 06.11.2005.

**ಪ್ರಸ್ತಾವನೆ :**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ 69 : ಸಿಎಲ್ಎಂ : 2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು ಕೆ.ಎಂ. ಆಶಾ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚನ್ನಗಿರಿ ಟೌನ್, ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಚನ್ನಗಿರಿ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಚನ್ನಗಿರಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 25.11.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1916 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿ**

**ವಿಷಯ:** ಶ್ರೀ ಶಿವಾನಂದ, ರೇಷ್ಮೆ ಪ್ರದರ್ಶಕರು, ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಲಾಲಗೊಂಡನಹಳ್ಳಿ ಇವರ ವಿರುದ್ಧದ ಶಿಸ್ತು ಕ್ರಮ ಕುರಿತು.

**ಉಲ್ಲೇಖ:** 1) ರೇಷ್ಮೆ ಉಪನಿರ್ದೇಶಕರು, ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಸೂಲಿಬೆಲೆ ಇವರ ತಿಳುವಳಿಕೆ ಪತ್ರ ಸಂಖ್ಯೆ ರೇಉನಿಸೂ : ಸಿ1 : ವೈಕ : 17 : 2005-06, ದಿನಾಂಕ: 16.08.2005.

2) ನೌಕರರ ಲಿಖಿತ ಹೇಳಿಕೆ ಪತ್ರ ದಿನಾಂಕ : 26.08.2005.

3) ರೇಷ್ಮೆ ಉಪನಿರ್ದೇಶಕರು, ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಸೂಲಿಬೆಲೆ ಇವರ ಪತ್ರ ಸಂಖ್ಯೆ: ರೇಉನಿಸೂ : ಸಿ1 : ಶಿಸ್ತು : ವೈಕ : 17 : 2005-06, ದಿನಾಂಕ 1.10.2005.

**ಪ್ರಸ್ತಾವನೆ :**

ಶ್ರೀ ಶಿವಾನಂದ, ರೇಷ್ಮೆ ಪ್ರದರ್ಶಕರು, ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಲಾಲಗೊಂಡನಹಳ್ಳಿ ಇವರು ದಿನಾಂಕ: 13.03.2002 ರಿಂದ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿದ್ದರೆಂಬ ಆರೋಪದ ಮೇರೆಗೆ ರೇಷ್ಮೆ ಉಪನಿರ್ದೇಶಕರು, ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಸೂಲಿಬೆಲೆ ಇವರು ಉಲ್ಲೇಖ (1) ರಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11 ರನ್ವಯ ತಿಳುವಳಿಕೆ ಪತ್ರವನ್ನು ದೋಷಾರೋಪಣ ಪಟ್ಟಿಯೊಂದಿಗೆ ಅನುಬಂಧ-1 ರಿಂದ 4 ರವರೆಗೆ ಜಾರಿಗೊಳಿಸಿ ಲಿಖಿತ ಹೇಳಿಕೆ ಸಲ್ಲಿಸಲು ಸೂಚಿಸಲಾಗಿ ಶ್ರೀ ಶಿವಾನಂದ ರವರು ದಿನಾಂಕ 26.08.2005 ರ ಲಿಖಿತ ಹೇಳಿಕೆಯಲ್ಲಿ ತಾವು ಮಧುಮೇಹ ಕಾಯಿಲೆಯಿಂದ ನರಳುತ್ತಿದ್ದು ಆರೋಗ್ಯವು ಸುಧಾರಿಸಿಲ್ಲದಿರುವುದರಿಂದ ಕಛೇರಿಗೆ ಹಾಜರಾಗಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಸ್ವಯಂ ನಿವೃತ್ತಿ ನೀಡಬೇಕೆಂದು ವೈದ್ಯಕೀಯ ಪ್ರಮಾಣ ಪತ್ರಗಳನ್ನು ಲಗತ್ತಿಸಿ ವಿನಂತಿಸಿದ್ದರು. ರೇಷ್ಮೆ ಉಪನಿರ್ದೇಶಕರು, ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಸೂಲಿಬೆಲೆ ಇವರು ಉಲ್ಲೇಖ (3) ರ ಪ್ರಸ್ತಾವನೆಯಲ್ಲಿ ನೌಕರರು ದೀರ್ಘಕಾಲ ಅನಧಿಕೃತ ಗೈರುಹಾಜರಾಗಿದ್ದು, ಸ್ವಯಂ ನಿವೃತ್ತಿಗೆ ಕೋರಿರುವುವರೆಂದು ತಿಳಿಸಿ, ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಶ್ರೀ ಶಿವಾನಂದ, ರೇಷ್ಮೆ ಪ್ರದರ್ಶಕರು ದಿನಾಂಕ. 13.03.2002 ರಿಂದ ಈ ತಹಲ್‌ವರೆಗೂ ಅಂದರೆ 3 ವರ್ಷಗಳಿಗೂ ಮೀರಿ ದೀರ್ಘಕಾಲದ ಅನಧಿಕೃತ ಗೈರುಹಾಜರಾಗಿದ್ದು, ನೌಕರರು ಲಿಖಿತ ಹೇಳಿಕೆಯಲ್ಲಿ ತಾವು ಅನಾರೋಗ್ಯದಿಂದ ನರಳುತ್ತಿದ್ದು, ಸೇವೆಯಲ್ಲಿ ಮುಂದುವರೆಯಲು ಸಾಧ್ಯವಿಲ್ಲ ಎಂದು ತಿಳಿಸಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ : 3 : ಶಿಸ್ತು : 7 : 05-06 ಬೆಂಗಳೂರು, ದಿನಾಂಕ: 30ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ವಯ ಹಾಗೂ 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರಿಯಾದ ನಾನು ಸದರಿ ನಿಯಮ 8(vi) ರ ಮೇರೆಗೆ ಶ್ರೀ ಶಿವಾನಂದ, ರೇಷ್ಮೆ ಪ್ರದರ್ಶಕ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಲಾಲಗೊಂಡನಹಳ್ಳಿ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ. ಶ್ರೀ ಶಿವಾನಂದ ರವರು ಅನಧಿಕೃತ ಗೈರುಹಾಜರಾಗಿರುವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 106 ರನ್ವಯ ವೇತನ ರಹಿತ ರಜೆ ಎಂದೂ ಸಹ ಪರಿಗಣಿಸಿದೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು

ಪಿ.ಆರ್. 1917 ಹಾಗೂ ರೇಷ್ಮೆ ನಿರ್ದೇಶಕರು : ಮತ್ತು ಶಿಸ್ತು ಪ್ರಾಧಿಕಾರಿ.

## ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ನಡವಳಿಗಳು

**ವಿಷಯ :** ಶ್ರೀ ಸಿ. ಅಂಜನಪ್ಪ, ಕಛೇರಿ ಅಧೀಕ್ಷಕರು, ರಾಜ್ಯ ಆರೋಗ್ಯ ಮತ್ತು ಕುಕ. ಸಂಸ್ಥೆ, ಮಾಗಡಿ ರಸ್ತೆ, ಬೆಂಗಳೂರು, ಇವರ ವಿರುದ್ಧ ಲೋಕಾಯುಕ್ತದಲ್ಲಿ ದಾಖಲಾಗಿರುವ ಟ್ರ್ಯಾಪ್ ಪ್ರಕರಣ, ನ್ಯಾಯಾಲಯದ ತೀರ್ಪು ಅಂತಿಮ ಆದೇಶ.

**ಉಲ್ಲೇಖ :**
1) ಉಪ ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಇವರ ಪತ್ರ ಸಂಖ್ಯೆ: ಲೋಕ್:ಎಎಸ್‌ವಿ:ಸಿಟಿ:ಕ್ರೈಂ:1: 2002, ದಿನಾಂಕ: 6.11.2004.
2) ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್:ಎಎಸ್‌ವಿ(ಜಿ) ಸಿಟಿ:ಕ್ರೈವಿ:11:2002, ದಿನಾಂಕ: 6.11.2004.
3) ನಿರ್ದೇಶನಾಲಯದ ಕಾರಣ ಕೇಳುವ ನೋಟೀಸು ಸಂಖ್ಯೆ: ಡಿಪಿಎನ್(1)ಸಿಆರ್:29:02-03, ದಿನಾಂಕ: 14.10.2004.
4) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಕಾರಣ ಕೇಳುವ ನೋಟೀಸಿಗೆ ನೀಡಿರುವ ತಡೆಯಾಜ್ಞೆ, ದಿ: 22.9.2005.
5) ನಿರ್ದೇಶನಾಲಯದಿಂದ ಸರ್ಕಾರಕ್ಕೆ ಸ್ಪಷ್ಟನೇ ಕೋರಿ ಬರೆದ ಪತ್ರ ಸಂಖ್ಯೆ: ಡಿಪಿಎನ್(1) ಸಿಆರ್:29:2002-03, ದಿನಾಂಕ: 22.11.2004.
6) ಸರ್ಕಾರದ ಪತ್ರ ಸಂಖ್ಯೆ: ಆಕುಕ:700:ಹೆಚ್‌ಎಸ್‌ಎಂ:2004, ದಿನಾಂಕ: 8.11.2003.

**ಪ್ರಸ್ತಾವನೆ:**

ಶ್ರೀ ಸಿ. ಅಂಜನಪ್ಪ, ಕಛೇರಿ ಅಧೀಕ್ಷಕರು, ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ, ಮಾಗಡಿ ರಸ್ತೆ, ಬೆಂಗಳೂರು, ಆದ ಇವರು ಈ ಹಿಂದೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ನಾಗರತ್ನಮ್ಮ ಎಂ., ಸಮುದಾಯ ಆರೋಗ್ಯ ಕೇಂದ್ರ, ದೇವನಹಳ್ಳಿ, ಇವರಿಂದ ಲಂಚ ಸ್ವೀಕರಿಸುತ್ತಿದ್ದ ಸಮಯದಲ್ಲಿ ಲೋಕಾಯುಕ್ತರು ಬೀಸಿದ ಬಲೆಗೆ ಬಿದ್ದು ನ್ಯಾಯಾಲಯವು ಇವರನ್ನು ತಪ್ಪಿತಸ್ಥರೆಂದು ಪರಿಗಣಿಸಿ ಕಾರಾಗೃಹವಾಸದ ದಂಡನೆ ವಿಧಿಸಿದೆ. ನೌಕರರು ನ್ಯಾಯಾಲಯದ ದಂಡನಾದೇಶದ ವಿರುದ್ಧ ತಡೆಯಾಜ್ಞೆ ತಂದಿದ್ದು, ನ್ಯಾಯಾಲಯವು ನೌಕರರನ್ನು ಆರೋಪದಿಂದ ಮುಕ್ತಗೊಳಿಸಿಲ್ಲವಾದ್ದರಿಂದ ಕೆ.ಸಿ.ಎಸ್. (ಸಿಸಿಎ) ನಿಯಮ 1(1)ರ ಪ್ರಕಾರ ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿತ್ತು, ಸದರಿ ನೌಕರರು ನಿರ್ದೇಶನಾಲಯದ ಕಾರಣ ಕೇಳುವ ನೋಟೀಸಿಗೆ ಕರ್ನಾಟಕ ಆಡಳಿತ ಮಂಡಳಿಯಿಂದ ತಡೆಯಾಜ್ಞೆ ತಂದಿದ್ದು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ತನ್ನ ಅಂತಿಮ ಆದೇಶದಲ್ಲಿ ನಿರ್ದೇಶನಾಲಯದ ಕಾರಣ ಕೇಳುವ ನೋಟೀಸನ್ನು ರದ್ದುಗೊಳಿಸಿದ್ದು, ಮುಂದುವರೆದು ಈ ಆದೇಶವು ಸದರಿ ನೌಕರರ ವಿರುದ್ಧ ಕಾನೂನಿನ ಪ್ರಕಾರ ಕ್ರಮ ಕೈಗೊಳ್ಳಲು ಅಡ್ಡಿಬರುವುದಿಲ್ಲ ಎಂದು ಆದೇಶ ನೀಡಿದ್ದು, ಈ ಆದೇಶದ ಬಗ್ಗೆ ಸ್ಪಷ್ಟನೇ ಕೋರಿ ಸರ್ಕಾರಕ್ಕೆ ಪತ್ರ ಬರೆಯಲಾಗಿತ್ತು. ಸರ್ಕಾರವು ದಿನಾಂಕ ತಮ್ಮ ಪತ್ರ ದಿನಾಂಕ: 8.11.2005 ರಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ: ಡಿಪಿಎಆರ್ 9 ಸೇಇವಿ 95, ದಿನಾಂಕ: 26.6.1995 ರನ್ವಯ ಹಾಗೂ ಕೆಸಿಎಸ್ (ಸಿಸಿಎ) ನಿಯಮಾವಳಿಗಳನ್ವಯ ಈ ಪ್ರಕರಣದಲ್ಲಿ ಕ್ರಿಮಿನಲ್ ಮೊಕದ್ದಮೆಯ ತೀರ್ಮಾನವನ್ನು ಕಾಯುವ ಅಗತ್ಯವಿಲ್ಲವಾದ್ದರಿಂದ ಶ್ರೀ ಸಿ. ಅಂಜನಪ್ಪ, ಕಛೇರಿ ಅಧೀಕ್ಷಕರನ್ನು ತಕ್ಷಣವೆ ಸರ್ಕಾರಿ ಸೇವೆಯಿಂದ ವಜಾ ಮಾಡುವಂತೆ ಸೂಚಿಸಿರುವುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಡಿಪಿಎನ್(1)ಸಿಆರ್:29:2002-03, ದಿನಾಂಕ: 17ನೇ ನವೆಂಬರ್ 2005**

ಮೇಲೆ ವಿವರಿಸಿರುವ ಕಾರಣಗಳಿಂದ 1957ರ ಕೆ.ಸಿ.ಎನ್ (ಸಿಸಿಎ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸಿ. ಅಂಜನಪ್ಪ, ಕಛೇರಿ ಅಧೀಕ್ಷಕರು, ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ, ಮಾಗಡಿ ರಸ್ತೆ, ಬೆಂಗಳೂರು, ಇವರನ್ನು ಕೆ.ಸಿ.ಎಸ್. (ಸಿಸಿಎ) ನಿಯಮ 8(8)ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿರುತ್ತೇನೆ.

ಟಿಪ್ಪಣಿ ಆಯುಕ್ತರಿಂದ ಅನುಮೋದಿಸಿದೆ.

**ಡಾ: ಎಂ.ಜಿ. ಪ್ರಸಾದ್**
ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್. 1846

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ:ಎಲ್.ಆರ್.ಎಫ್/ ಸಿಆರ್: 35/ 2005-06, ಬೆಂಗಳೂರು, ದಿನಾಂಕ:27ನೇ ಸೆಪ್ಟೆಂಬರ್, 2005**

**ವಿಷಯ :** ಸಿಲ್ವರ್ ಕ್ರೆಸ್ಟ್ ಕ್ಲಾತಿಂಗ್ ಪ್ರೈವೇಟ್ ಲಿಮಿಟೆಡ್ ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಬೂರಗುಂಟೆ ಗ್ರಾಮದ ಸ.ನಂ.80ರಲ್ಲಿ 0-20 ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸಿಲ್ವರ್ ಕ್ರೆಸ್ಟ್ ಕ್ಲಾತಿಂಗ್ ಪ್ರೈವೇಟ್ ಲಿಮಿಟೆಡ್ ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಬೂರಗುಂಟೆ ಗ್ರಾಮದ ಸ.ನಂ.80ರಲ್ಲಿ 0-20 ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್.: ಸಿಆರ್:109 (ಎ)/ ಸಿಆರ್-6/05-06. ದಿನಾಂಕ: 15.09.2005ರಲ್ಲಿ ಪ್ರಸ್ತಾಪಿತ ಬೂರಗುಂಟೆ ಗ್ರಾಮದ ಸ.ನಂ.80ರಲ್ಲಿ 0-20 ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(i) (ii)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಕಂಪನಿಗಳ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ: 18.11.1993ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಕೈಗಾರಿಕಾ ಉದ್ದೇಶಕ್ಕೆ 10 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(i) (ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಬೂರಗುಂಟೆ ಗ್ರಾಮದ ಸ.ನಂ.80ರಲ್ಲಿ 0-20 ಗುಂಟೆ ಜಮೀನನ್ನು ಸಿಲ್ವರ್ ಕ್ರೆಸ್ಟ್ ಕ್ಲಾತಿಂಗ್ ಪ್ರೈವೇಟ್ ಲಿಮಿಟೆಡ್, ಪ್ಲಾಟ್ ನಂ.4ಇ, ಕೆ.ಐ.ಎ.ಡಿ.ಬಿ. ಇಂಡಸ್ಟ್ರಿಯಲ್ ಏರಿಯಾ, ಅತ್ತಿಬೆಲೆ ಆನೇಕಲ್ ತಾಲ್ಲೂಕು ರವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಖರೀದಿಗೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(i) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003ರಂತೆ ಕೈಗಾರಿಕಾ ಉದ್ದೇಶಕ್ಕೆ 1 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಗೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇ.55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
4) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
6) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಪಿ.ಆರ್.1556 ಬೆಂಗಳೂರು ಜಿಲ್ಲೆ, ಬೆಂಗಳೂರು.

**IN THE COURT OF THE CIVIL JUDGE (Jr.Dn) & JMFC, SIRUGUPPA BELLARY DISTRICT**
**PROCLAMATION UNDER SECTION 457(2) Cr.P.C.**

1) Whereas in the following Criminal cases the properties seized by the police and produced before this court are be unclaimed properties and it appears that the claimant is unknown to this Court.

2) In exercise of powers vested under section 457(2) Cr.P.C. It is hereby noticed that any person who may have claim to the under mentioned properties may appear before the Civil Judge (Jr.Dn) & JMFC, Siruguppa, Bellary District and establish their claim within 6 months from the date of this proclamation, failing which the action will be taken as per law.

**Dated this 7th day of October 2005**

| Sl. No. | Crime Number & offence | PF No & Name of the police station | Discription of Property | PR No. | Date of Seized the police |
|---|---|---|---|---|---|
| 1. | Siruguppa police station U/S 75KP Act | 88/2005 | Kinetic motor cycle blue colour Chasi No. CF 50020112 and Engine No.B 13 | 204/05 | 16.05.2005 |

Place: Siruguppa
Date:07.10.05

**CHANDRASHEKAR M.B.**
PR-1558 Civil Judge (Jr.Dn.) & JMFC, Siruguppa.

**REVENUE SECRETARIAT**
**NOTIFICATION**
**RD 56 LGA 2003, Dated: 26th September, 2005**
**FORM NO.29**
**DECLARATION UNDER SUB-SECTION (5) OF SECTION 68 RULE 96**

In exercise of the powers conferred by sub-section (5) of section 68 of the Karnataka Land Revenue Act, 1964, the State Government being satisfied after considering the record of the proceedings and the report of the Deputy Commissioner, Udupi District that the part of the public road or part thereof specified in the schedule to the Gazette Notification No.HSR: EDR: 608/2001-02, Dated: 27.03.2002 Published in the Karnataka Gazette Dated: 11.04.2002 issued under sub-section (1) of the said section and specified in the Schedule below as not required for the use of the pulbic, hereby declares that all rights of the Public as well as of persons in or over such part of the public road are extinguished.

**SCHEDULE**

Village in which the part of the road is situated.

Taluk : Karkala
District : Udupi
Description of the part of the road : Portion of Poramboke Sy.No.405/2 of Kukkundoor Village of Karkala Taluk. (Portion of Harjaddu Road)
Approximate of the part of the road : 0.03 Acres (As per sketch)

**Boundaries**

| EAST | SOUTH | WEST | NORTH |
|---|---|---|---|
| 405-3 | 405-2 | 405-2 & Harjaddu Road | 405-2 |

By Order and in the name of the Governor of Karnataka,
**N.A. MARGARET**
PR-1559 Under Secretary to Government,
Revenue Department (Land Grants).

## GOVERNMENT OF KARNATAKA,
## DIRECTORATE OF ECONOMICS AND STATISTICS, BANGALORE-1.
### Consumer Price Index Numbers For Industrial Workers

No. DES 23 PWX 2005 Month: July, 2005

State: Karnataka Base: 1987-88=100 Date : 05-10-2005

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Mysore | Rai chur | Tum kur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:**<br>(a) Cereals & Products | 344 | 399 | 375 | 343 | 328 | 351 | 330 | 358 | 286 | 376 | 329 | 388 |
| | (b) Pulses & Products | 249 | 333 | 323 | 353 | 307 | 304 | 328 | 325 | 319 | 322 | 319 | 324 |
| | (c) Oil & Fats | 240 | 279 | 247 | 248 | 258 | 250 | 255 | 262 | 238 | 262 | 259 | 247 |
| | (d) Meat, Fish & Eggs | 349 | 391 | 365 | 460 | 419 | 341 | 340 | 376 | 533 | 390 | 400 | 376 |
| | (e) Milk & Products | 343 | 263 | 318 | 323 | 306 | 267 | 251 | 342 | 289 | 257 | 307 | 281 |
| | (f) Condiments & Spices | 209 | 311 | 323 | 373 | 270 | 252 | 272 | 238 | 250 | 298 | 214 | 270 |
| | (g) Vegetables & Fruits | 247 | 278 | 292 | 352 | 298 | 266 | 300 | 369 | 246 | 270 | 195 | 355 |
| | (h) Other Food | 296 | 376 | 345 | 365 | 303 | 314 | 330 | 306 | 291 | 301 | 309 | 339 |
| | **FOOD GROUP INDEX** | 302 | 347 | 339 | 350 | 312 | 305 | 309 | 337 | 321 | 319 | 307 | 337 |
| II. | Pan, Supari, Tobacco & Intoxicants | 310 | 341 | 365 | 340 | 386 | 439 | 346 | 475 | 294 | 323 | 352 | 397 |
| III. | Fuel & Light | 312 | 321 | 273 | 457 | 290 | 326 | 353 | 333 | 272 | 310 | 364 | 289 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 255 | 225 | 373 | 277 | 234 | 345 | 382 | 242 | 293 | 405 | 211 |
| VI. | **MISCELLANEOUS:**<br>(a) Medical Care | 585 | 511 | 372 | 291 | 285 | 268 | 385 | 318 | 336 | 298 | 394 | 224 |
| | (b) Education, Recreation & Amusement | 349 | 337 | 521 | 217 | 388 | 474 | 324 | 293 | 364 | 451 | 376 | 369 |
| | (c) Transport & Communication | 415 | 406 | 332 | 526 | 595 | 357 | 365 | 560 | 458 | 572 | 388 | 388 |
| | (d) Personal Care & effects | 257 | 282 | 257 | 280 | 317 | 257 | 290 | 290 | 270 | 312 | 266 | 271 |
| | (e) Others | 331 | 347 | 283 | 426 | 297 | 268 | 285 | 286 | 235 | 300 | 426 | 255 |
| | Miscellaneous Group | 371 | 346 | 335 | 327 | 350 | 319 | 320 | 306 | 323 | 387 | 363 | 290 |
| | **GENERAL INDEX** | **287** | **309** | **295** | **333** | **289** | **280** | **294** | **313** | **289** | **294** | **309** | **275** |
| | To convert to Base 1960 Multiply by Linking Factor. | **7.39** | **9.19** | **8.27** | **…** | **8.26** | **8.56** | **9.25** | **7.92** | **9.31** | **9.05** | **…** | **…** |

for Director.

**Government of India,**
**Ministry of Labour (Labour Bureau)**
**No. 112/1(KTK)/2001-FLS**

'Cleremount' Shimla-171 004

**CONSUMER PRICE INDEX NUMBERS FOR INDUSTRIAL WORKERS (BASE-1982=100)**

State: Karnataka Month: July, 2005

| Code | Group/Sub-group/ Centre | Bangalore | Belgaum | Hubli Dharwar | Mercara |
|---|---|---|---|---|---|
| | 1 | 2 | 3 | 4 | 5 |
| 1000 | **I A:FOOD:** | | | | |
| 1100 | (a) Cereals & Products | 429 | 536 | 453 | 438 |
| 1200 | (b) Pulses & Products | 567 | 535 | 532 | 594 |
| 1300 | (c) Oils & Fats | 392 | 365 | 372 | 425 |
| 1400 | (d) Meat, Fish & Eggs | 697 | 616 | 635 | 586 |
| 1500 | (e) Milk & Products | 381 | 529 | 442 | 461 |
| 1600 | (f) Condiments & Spices | 484 | 566 | 563 | 460 |
| 1700 | (g) Vegetables & Fruits | 487 | 577 | 655 | 488 |
| 1800 | (h) Other Food | 790 | 762 | 710 | 756 |
| 1000 | **I-A FOOD GROUP** | 529 | 576 | 533 | 523 |
| 2000 | I-Pan, Supari, Tobacco & Intoxicants | 651 | 617 | 586 | 524 |
| 3000 | II-Fuel & Light | 826 | 681 | 597 | 431 |
| 4000 | III-Housing Index | 630 | 797 | 651 | 200 |
| 5000 | IV-Clothing, Bedding & Footwear | 300 | 291 | 325 | 436 |
| 6000 | **V-Miscellaneous:** | | | | |
| 6100 | (a) Medical Care | 445 | 527 | 468 | 347 |
| 6200 | (b) Education, Recreation & Amusement | 484 | 744 | 605 | 617 |
| 6300 | (c) Transport & Communication | 809 | 522 | 787 | 688 |
| 6400 | (d) Personal Care & effects | 488 | 484 | 516 | 471 |
| 6500 | (e) Others | 523 | 595 | 460 | 478 |
| 6600 | Miscellaneous Group | 548 | 563 | 537 | 510 |
| | **GENERAL INDEX** | **535** | **590** | **545** | **489** |

PR-1560 for Director.

**ನಗರಾಭಿವೃದ್ಧಿ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ:ನಅಇ 60 ಎಸಿಎಂ 2005, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್, 2005**

ಮೈಸೂರು ಅಜೆಂಡಾ ಟಾಸ್ಕ್‌ಫೋರ್ಸ್ ಸಮಿತಿಯನ್ನು ಪುನರ್ ರಚಿಸುವವರೆಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 65 ಎಸಿಎಂ 2001, ದಿನಾಂಕ: 24.10.2001 ಮತ್ತು ದಿನಾಂಕ: 20.11.2001ರ ಆದೇಶದಲ್ಲಿ ಅಧಿಕಾರೇತರ ಸದಸ್ಯರನ್ನು ಒಳಗೊಂಡಂತೆ ರಚಿಸಿರುವ ಮೈಸೂರು ಅಜೆಂಡಾ ಟಾಸ್ಕ್‌ಫೋರ್ಸ್ ಸಮಿತಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ವಿಸರ್ಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜೆ. ಸಂಪತ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್.1561

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ:ಸಿಆಸುಇ 84 ಸಸಿವಿ 2004, ಬೆಂಗಳೂರು, ದಿನಾಂಕ:26ನೇ ಸೆಪ್ಟೆಂಬರ್, 2005**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಸಸಿವಿ 2005, ದಿನಾಂಕ: 26.09.2005ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಾನೂನು ಕೋಶದ ಮುಖ್ಯಸ್ಥರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ರದ್ದು ಪಡಿಸಿರುವ ಹಿನ್ನೆಲೆಯಲ್ಲಿ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎ.ಎನ್.ಸೊಲ್ಲಾಪುರ್ ಕರ್ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಕಾನೂನು ಕೋಶದ ಮುಖ್ಯಸ್ಥರ ಹುದ್ದೆಗೆ ಸ್ಥಳಾಂತರಿಸಲಾಗಿದೆ. ಹಾಗೂ ಈ

ಕಾನೂನು ಕೋಶವನ್ನು 'ಒಳಾಡಳಿತ ಮತ್ತು ಸಾರಿಗೆ ಇಲಾಖೆ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಹಾಗೂ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಕಾನೂನು ಕೋಶ' ಎಂದು ಮರುಪದನಾಮೀಕರಿಸಿದೆ.

ಇದರಿಂದಾಗಿ, ಈ ಹಿಂದೆ ಅಸ್ತಿತ್ವದಲ್ಲಿದ್ದ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಾನೂನು ಕೋಶದ ಸಿಬ್ಬಂದಿ ವರ್ಗದವರು ಇನ್ನು ಮುಂದೆ ಒಳಾಡಳಿತ ಮತ್ತು ಸಾರಿಗೆ ಇಲಾಖೆ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆ ಹಾಗೂ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಕಾನೂನು ಕೋಶದ ಮುಖ್ಯಸ್ಥರ ನಿಯಂತ್ರಣದಲ್ಲಿ ಕಾರ್ಯನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್.1562

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ:ಆಕುಕ 122 ಪಿಐಎಂ 2005, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್, 2005

ವಿಶೇಷ ನೇಮಕಾತಿ ಸಮಿತಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಡಿಆರ್‌ಸಿ (2) ಬಿಎಲ್/ 100/03-04 ದಿನಾಂಕ: 01.06.2004ರ ಮುಖ್ಯ ಪಟ್ಟಿಯಲ್ಲಿ ಆಯ್ಕೆಯಾಗಿರುವ ಮೊದಲನೆಯ ಅಭ್ಯರ್ಥಿಯು ಉಪನ್ಯಾಸಕರ ಹುದ್ದೆಯಲ್ಲಿ ಆಯ್ಕೆ ಆಗಿರುವುದರಿಂದ ವೈದ್ಯರು ದರ್ಜೆ-2 ಹುದ್ದೆಗೆ ಹಾಜರಾಗುತ್ತಿಲ್ಲವೆಂದು ಸಹಮತ ನೀಡಿರುವುದರಿಂದ ಬ್ಯಾಕ್‌ಲಾಗ್ ಹೆಚ್ಚುವರಿ ಪಟ್ಟಿಯಲ್ಲಿ ಕ್ರಮ ಸಂಖ್ಯೆ: (1)ರಲ್ಲಿ ಆಯ್ಕೆ ಮಾಡಿರುವ ಈ ಕೆಳಕಂಡ ಅಭ್ಯರ್ಥಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರು ದರ್ಜೆ-2 (ಆಯುರ್ವೇದ) (ಗ್ರೂಪ್-ಬಿ) ಬ್ಯಾಕ್‌ಲಾಗ್ ಹುದ್ದೆಗೆ ರೂ.6000-150-7200-200-8800-260-10880-320-11200ರ ವೇತನ ಶ್ರೇಣಿಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಹೆಚ್ಚುವರಿ ಪಟ್ಟಿಯ ಕ್ರಮ ಸಂಖ್ಯೆ | ವೈದ್ಯರ ಹೆಸರು ಮತ್ತು ವಿಳಾಸ | ಹುಟ್ಟಿದ ದಿನಾಂಕ ಮತ್ತು ಆಯ್ಕೆಯಾಗಿರುವ ಮೀಸಲಾತಿ ವರ್ಗ/ ಪ್ರವರ್ಗ | ನೇಮಕಾತಿ ಮಾಡಿರುವ ಹುದ್ದೆ ಮತ್ತು ಸ್ಥಳ |
|---|---|---|---|
| 1. | ಡಾ: ಕೆ.ಕುಮಾರ್, S/o ಎನ್.ಕೆ. ನಂಜಯ್ಯ, ನಂ.3, ಮಾದರಿಮನೆ, ರವಿಹಟ್ಟಿ, 4ನೇ ಕ್ರಾಸ್, ಅಶೋಕ್‌ಪುರಂ, ಮೈಸೂರು-8. | 19.05.1969 ಪ.ಜಾ. (ಸಾ) | ವೈದ್ಯರು ದರ್ಜೆ-2, ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ ಹಿರಿಯೂರು, ಟಿ-ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ. |

ಈ ನೇಮಕಾತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿದೆ:

1) ಸದರಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿ 1977ರ ನಿಯಮ 5 ಮತ್ತು 6ರನ್ವಯ 2 ವರ್ಷಗಳ ಖಾಯಂ ಪೂರ್ವ ಪರಿವೀಕ್ಷಣಾ ಸೇವಾ ಅವಧಿಗೆ ಒಳಪಟ್ಟಿರುತ್ತದೆ.
2) ಸದರಿ ಅಭ್ಯರ್ಥಿಯು, ನೇಮಕಾತಿಯು ಮತ್ತು ಸೇವಾ ಸೌಲಭ್ಯಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಗಳು: ಆದೇಶಗಳ ಅಧೀನಕ್ಕೊಳಪಟ್ಟಿರುತ್ತದೆ.
3) ಸದರಿ ನೇಮಕಾತಿಯು ತಾತ್ಕಾಲಿಕವಾಗಿದ್ದು, ತಕ್ಷಣದಿಂದ ಜಾರಿಗೆ ಬರುತ್ತದೆ.
4) ಈ ನೇಮಕಾತಿಯು ಆದೇಶ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕ ಮಾಡಿದ ಹುದ್ದೆಗೆ ಹಾಜರಾಗತಕ್ಕದ್ದು. ನಿಗದಿತ ದಿನಾಂಕದೊಳಗಾಗಿ ಕರ್ತವ್ಯಕ್ಕೆ ಹಾಜರಾಗದಿದ್ದ ಪಕ್ಷದಲ್ಲಿ ಸದರಿ ಅಭ್ಯರ್ಥಿಯು ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮವಳಿ ನಿಯಮ 5 (2)ರಲ್ಲಿರುವಂತೆ ಆಯ್ಕೆ ಪಟ್ಟಿಯಲ್ಲಿನ ಜೇಷ್ಠತೆಯನ್ನು ಕಳೆದುಕೊಳ್ಳುವರು ತದನಂತರ ನೇಮಕಾತಿಯ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೆ ರದ್ದುಗೊಳಿಸಲಾಗುವುದು.
5) ಸದರಿ ಅಭ್ಯರ್ಥಿಯು ಸರ್ಕಾರವು ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಮತ್ತು ಕೆ.ಸಿ.ಎಸ್. (ಕನ್ನಡ ಭಾಷಾ ಪರೀಕ್ಷೆ) 1974ರನ್ವಯ ಖಾಯಂಪೂರ್ವ ಅವಧಿಯಾದ 2 ವರ್ಷದೊಳಗಾಗಿ ತೇರ್ಗಡೆ ಹೊಂದತಕ್ಕದ್ದು.
6) ಸದರಿ ಅಭ್ಯರ್ಥಿಯು ನೇಮಕ ಮಾಡಲ್ಪಟ್ಟ ಕೇಂದ್ರ ಸ್ಥಳದಲ್ಲಿಯೇ ವಾಸಿಸತಕ್ಕದ್ದು. ಸದರಿ ಅಭ್ಯರ್ಥಿಗಳಿಗೆ ನೇಮಕಾತಿ ಮಾಡಿದ ಸ್ಥಳಕ್ಕೆ ಸೇರಲು ಯಾವುದೇ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ನೀಡಲಾಗುವುದಿಲ್ಲ.
7) ಸದರಿ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಮೊದಲು ಸಂಬಂಧಪಟ್ಟ ವಿಭಾಗೀಯ ಉಪನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಇವರಿಗೆ ಮೂಲ ದಾಖಲಾತಿಗಳನ್ನು ಅಂದರೆ ವೈದ್ಯರು ದರ್ಜೆ-2, ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆ, ಅಂಕಪಟ್ಟಿ, ಜನ್ಮ ದಿನಾಂಕದ ದಾಖಲೆ, ಜಾತಿ ಪ್ರಮಾಣ ಪತ್ರ ಇತ್ಯಾದಿಗಳನ್ನು ಸಲ್ಲಿಸತಕ್ಕದ್ದು.
8) ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
9) ಸದರಿ ಅಭ್ಯರ್ಥಿಯು ವಿದ್ಯಾರ್ಹತೆ, ಜನ್ಮ ದಿನಾಂಕ ಇತ್ಯಾದಿ ಪ್ರಮಾಣ ಪತ್ರಗಳಲ್ಲಿ ತಪ್ಪು ಮಾಹಿತಿ ಒದಗಿಸಿರುವುದು ಕಂಡು ಬಂದಲ್ಲಿ ಅವರ ನೇಮಕಾತಿ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೆ ರದ್ದುಗೊಳಿಸಲಾಗುವುದು ಮತ್ತು ಅಭ್ಯರ್ಥಿಯು ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು.
10) ಸದರಿ ಅಭ್ಯರ್ಥಿಯು ನಿಗದಿತ ಅವಧಿಯೊಳಗೆ ಕರ್ತವ್ಯಕ್ಕೆ ಹಾಜರಾದ ಬಗ್ಗೆ ಸರ್ಕಾರವನ್ನು ಒಳಗೊಂಡಂತೆ ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳಿಗೆ ಸಿಟಿಸಿಯನ್ನು ಕಳುಹಿಸತಕ್ಕದ್ದು.

11) ಈ ಆದೇಶದನ್ವಯ ನಿಗದಿತ ಅವಧಿಯೊಳಗೆ ಕರ್ತವ್ಯಕ್ಕೆ ಹಾಜರಾಗದೆ ಇದ್ದರೆ ಉಪ ನಿರ್ದೇಶಕರು, (ವಿಭಾಗೀಯ ಕಛೇರಿ), ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಇವರು ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

12) ನೇಮಕಗೊಂಡ ಅಭ್ಯರ್ಥಿಯು ಕಡ್ಡಾಯವಾಗಿ 6 ವರ್ಷಗಳ ಕಾಲ ಗ್ರಾಮಾಂತರ ಪ್ರದೇಶಗಳಲ್ಲಿ ಸೇವೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್.1563

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕಾರಾಗೃಹಗಳ ಇಲಾಖೆ

## ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಛೇರಿ, ನಂ.4, ಶೇಷಾದ್ರಿ ರಸ್ತೆ, ಬೆಂಗಳೂರು-560 009

## ಅಧಿಸೂಚನೆ

### ಸಂಖ್ಯೆ:ಆರ್‌ಎಸ್/ ಸಿಆರ್-40/ 2005, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್, 2005

ಕೇಂದ್ರ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಕಾಯ್ದೆ 2005ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಕಾರಾಗೃಹಗಳ ಇಲಾಖೆಗೆ ಸಂಬಂಧಿಸಿದಂತೆ ಸೆಕ್ಷನ್ 2 (ಹೆಚ್)ರ ಅಡಿಯಲ್ಲಿ ಈ ಕೆಳಗೆ ಕಾಣಿಸಿದಂತೆ ಸಾರ್ವಜನಿಕ ಪ್ರಾಧಿಕಾರಗಳನ್ನು ಗುರುತಿಸಲಾಗಿದೆ.

1) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಛೇರಿ, ಬೆಂಗಳೂರು.
2) ಅಧೀಕ್ಷಕರ ಕಛೇರಿ, ಕೇಂದ್ರ ಕಾರಾಗೃಹಗಳು.
3) ಅಧೀಕ್ಷಕರ ಕಛೇರಿ, ಜಿಲ್ಲಾ ಕಾರಾಗೃಹಗಳು.
4) ಅಧೀಕ್ಷಕರ ಕಛೇರಿ, ಜಿಲ್ಲಾ ಕೇಂದ್ರ ಉಪಕಾರಾಗೃಹಗಳು.
5) ಅಧೀಕ್ಷಕರ ಕಛೇರಿ, ವಿಶೇಷ ಉಪಕಾರಾಗೃಹಗಳು.
6) ಅಧೀಕ್ಷಕರ ಕಛೇರಿ, ತಾಲ್ಲೂಕು ಉಪಕಾರಾಗೃಹಗಳು.
7) ಅಧೀಕ್ಷಕರ ಕಛೇರಿ, ಬಾಲಾಪರಾಧಿ ಶಾಲೆ, ಧಾರವಾಡ.
8) ಅಧೀಕ್ಷಕರ ಕಛೇರಿ, ಬಯಲು ಬಂಧೀಖಾನೆ, ಕೋರಮಂಗಲ.
9) ಪ್ರಾಚಾರ್ಯರ ಕಛೇರಿ, ಕಾರಾಗೃಹ ಸಿಬ್ಬಂದಿ ತರಬೇತಿ ಸಂಸ್ಥೆ, ಮೈಸೂರು.

ಮೇಲ್ಕಾಣಿಸಿದ ಸಾರ್ವಜನಿಕ ಪ್ರಾಧಿಕಾರಿಗಳಿಗೆ ಮಾಹಿತಿ ಪಡೆಯಲು ಹಕ್ಕು ಕಾಯ್ದೆ 2005ರ 5(1) ಮತ್ತು 5(2) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ"ಗಳನ್ನು ಹಾಗೂ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಗಿನಂತೆ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಕ ಮಾಡಲಾಗಿದೆ.

| ಕ್ರ.ಸಂ. | ಕಛೇರಿ | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1 | 2 | 3 | 4 | 5 |
| 1. | ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಛೇರಿ, ಬೆಂಗಳೂರು. | ಉಪ ಮಹಾನಿರೀಕ್ಷಕರು | ಅಂಕಿ ಅಂಶಗಳ ಮತ್ತು ಸಂಶೋಧನಾಧಿಕಾರಿ | ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು. |
| 2. | ಕೇಂದ್ರ ಕಾರಾಗೃಹ, ಬೆಂಗಳೂರು. | ಮುಖ್ಯ ಅಧೀಕ್ಷಕರು | ಸಹಾಯಕ ಅಧೀಕ್ಷಕರು (ಕಾರ್ಯಕಾರಿ) | ಉಪ ಮಹಾನಿರೀಕ್ಷಕರು |
| 3. | ಕೇಂದ್ರ ಕಾರಾಗೃಹ, ಬೆಳಗಾವಿ. | ಸಹಾಯಕ ಅಧೀಕ್ಷಕರು (ಕಾರ್ಯಕಾರಿ) | ಜೈಲರ್ (ಕಾರ್ಯಕಾರಿ) | ಮುಖ್ಯ ಅಧೀಕ್ಷಕರು |
| 4. | ಕೇಂದ್ರ ಕಾರಾಗೃಹ, ಬಳ್ಳಾರಿ. | ಸಹಾಯಕ ಅಧೀಕ್ಷಕರು (ಕಾರ್ಯಕಾರಿ) | ಜೈಲರ್ (ಕಾರ್ಯಕಾರಿ) | ಅಧೀಕ್ಷಕರು |
| 5. | ಕೇಂದ್ರ ಕಾರಾಗೃಹ, ಬಿಜಾಪುರ. | ಜೈಲರ್ (ಕಾರ್ಯಕಾರಿ) | ಚೀಫ್ ವಾರ್ಡರ್ (ಕಾರ್ಯಕಾರಿ) | ಅಧೀಕ್ಷಕರು |
| 6. | ಕೇಂದ್ರ ಕಾರಾಗೃಹ, ಗುಲ್ಬರ್ಗಾ. | ಸಹಾಯಕ ಅಧೀಕ್ಷಕರು (ಕಾರ್ಯಕಾರಿ) | ಜೈಲರ್ (ಕಾರ್ಯಕಾರಿ) | ಅಧೀಕ್ಷಕರು |
| 7. | ಕೇಂದ್ರ ಕಾರಾಗೃಹ, ಮೈಸೂರು. | ಸಹಾಯಕ ಅಧೀಕ್ಷಕರು (ಕಾರ್ಯಕಾರಿ) | ಜೈಲರ್ (ಕಾರ್ಯಕಾರಿ) | ಅಧೀಕ್ಷಕರು |
| 8. | ಬಾಲಾಪರಾಧಿ ಶಾಲೆ, ಧಾರವಾಡ. | ಜೈಲರ್ (ಕಾರ್ಯಕಾರಿ) | ಚೀಫ್ ವಾರ್ಡರ್ (ಕಾರ್ಯಕಾರಿ) | ಅಧೀಕ್ಷಕರು. |
| 9. | ಕಾರಾಗೃಹ ಸಿಬ್ಬಂದಿ ತರಬೇತಿ ಸಂಸ್ಥೆ, ಮೈಸೂರು. | ಸಹಾಯಕ ಅಧೀಕ್ಷಕರು | ಜೈಲರ್ | ಪ್ರಾಂಶುಪಾಲರು |

| 1 | 2 | 3 | 4 | 5 |
|---|---|---|---|---|
| 10. | ಬಯಲು ಬಂಧೀಖಾನೆ, ಕೋರಮಂಗಲ. | ಜೈಲರ್ (ಕಾರ್ಯಕಾರಿ) | ಚೀಫ್ ವಾರ್ಡರ್ (ಕಾರ್ಯಕಾರಿ) | ಅಧೀಕ್ಷಕರು |
| 11. | ಜಿಲ್ಲಾ ಕಾರಾಗೃಹ, ಬೀದರ್. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 12. | ಜಿಲ್ಲಾ ಕಾರಾಗೃಹ, ಕಾರವಾರ | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 13. | ಜಿಲ್ಲಾ ಕಾರಾಗೃಹ, ಮಂಗಳೂರು. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 14. | ಜಿಲ್ಲಾ ಕಾರಾಗೃಹ, ಮಡಿಕೇರಿ. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 15. | ಜಿಲ್ಲಾ ಕಾರಾಗೃಹ, ರಾಯಚೂರು. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 16. | ಜಿಲ್ಲಾ ಕಾರಾಗೃಹ, ಶಿವಮೊಗ್ಗ. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 17. | ಜಿಲ್ಲಾ ಕೇಂದ್ರ ಉಪ ಕಾರಾಗೃಹ, ಚಿತ್ರದುರ್ಗ. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 18. | ಜಿಲ್ಲಾ ಕೇಂದ್ರ ಉಪ ಕಾರಾಗೃಹ, ಹಾಸನ. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 19. | ಜಿಲ್ಲಾ ಕೇಂದ್ರ ಉಪ ಕಾರಾಗೃಹ, ಕೋಲಾರ. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 20. | ಜಿಲ್ಲಾ ಕೇಂದ್ರ ಉಪ ಕಾರಾಗೃಹ, ಮಂಡ್ಯ. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 21. | ಜಿಲ್ಲಾ ಕೇಂದ್ರ ಉಪ ಕಾರಾಗೃಹ, ತುಮಕೂರು. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 22. | ಜಿಲ್ಲಾ ಕೇಂದ್ರ ಉಪ ಕಾರಾಗೃಹ, ಚಿಕ್ಕಮಗಳೂರು. | ಅಧೀಕ್ಷಕರು | ಜೈಲರ್ | ಉಪ ಮಹಾನಿರೀಕ್ಷಕರು, (ಕೇಂದ್ರ ಕಾರ್ಯಾಸ್ಥಾನ) |
| 23. | ವಿಶೇಷ ಉಪ ಕಾರಾಗೃಹ, ದಾವಣಗೆರೆ. | ಅಧೀಕ್ಷಕರು | ಚೀಫ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 24. | ವಿಶೇಷ ಉಪ ಕಾರಾಗೃಹ, ಕೆ.ಜಿ.ಎಫ್. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 25. | ತಾಲ್ಲೂಕು ಉಪ ಕಾರಾಗೃಹ, ರಾಮನಗರಂ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 26. | ತಾಲ್ಲೂಕು ಉಪ ಕಾರಾಗೃಹ, ಬೈಲಹೊಂಗಲ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 27. | ತಾಲ್ಲೂಕು ಉಪ ಕಾರಾಗೃಹ, ಗೋಕಾಕ್. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 28. | ತಾಲ್ಲೂಕು ಉಪ ಕಾರಾಗೃಹ, ಹೊಸಪೇಟೆ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 29. | ತಾಲ್ಲೂಕು ಉಪ ಕಾರಾಗೃಹ, ಬಾದಾಮಿ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 30. | ತಾಲ್ಲೂಕು ಉಪ ಕಾರಾಗೃಹ, ಬಾಗಲಕೋಟೆ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 31. | ತಾಲ್ಲೂಕು ಉಪ ಕಾರಾಗೃಹ, ಜಮಖಂಡಿ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 32. | ತಾಲ್ಲೂಕು ಉಪ ಕಾರಾಗೃಹ, ಆಳಂದ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 33. | ತಾಲ್ಲೂಕು ಉಪ ಕಾರಾಗೃಹ, ಸುರಪುರ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 34. | ತಾಲ್ಲೂಕು ಉಪ ಕಾರಾಗೃಹ, ಯಾದಗಿರ್. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 35. | ತಾಲ್ಲೂಕು ಉಪ ಕಾರಾಗೃಹ, ಚಾಮರಾಜನಗರ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 36. | ತಾಲ್ಲೂಕು ಉಪ ಕಾರಾಗೃಹ, ಕೊಳ್ಳೇಗಾಲ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |

| 1 | 2 | 3 | 4 | 5 |
|---|---|---|---|---|
| 37. | ತಾಲ್ಲೂಕು ಉಪ ಕಾರಾಗೃಹ, ನಂಜನಗೂಡು. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 38. | ತಾಲ್ಲೂಕು ಉಪ ಕಾರಾಗೃಹ, ಕೆ.ಆರ್. ನಗರ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 39. | ತಾಲ್ಲೂಕು ಉಪ ಕಾರಾಗೃಹ, ಗದಗ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 40. | ತಾಲ್ಲೂಕು ಉಪ ಕಾರಾಗೃಹ, ಹುಬ್ಬಳ್ಳಿ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 41. | ತಾಲ್ಲೂಕು ಉಪ ಕಾರಾಗೃಹ, ಹುಮನಾಬಾದ್. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 42. | ತಾಲ್ಲೂಕು ಉಪ ಕಾರಾಗೃಹ, ಔರಾದ್. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 43. | ತಾಲ್ಲೂಕು ಉಪ ಕಾರಾಗೃಹ, ಯಲ್ಲಾಪುರ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 44. | ತಾಲ್ಲೂಕು ಉಪ ಕಾರಾಗೃಹ, ವಿರಾಜಪೇಟೆ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 45. | ತಾಲ್ಲೂಕು ಉಪ ಕಾರಾಗೃಹ, ದೇವದುರ್ಗ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 46. | ತಾಲ್ಲೂಕು ಉಪ ಕಾರಾಗೃಹ, ಗಂಗಾವತಿ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 47. | ತಾಲ್ಲೂಕು ಉಪ ಕಾರಾಗೃಹ, ಲಿಂಗಸುಗೂರು. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 48. | ತಾಲ್ಲೂಕು ಉಪ ಕಾರಾಗೃಹ, ಮಾನ್ವಿ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 49. | ತಾಲ್ಲೂಕು ಉಪ ಕಾರಾಗೃಹ, ಸಾಗರ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 50. | ತಾಲ್ಲೂಕು ಉಪ ಕಾರಾಗೃಹ, ತರೀಕೆರೆ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 51. | ತಾಲ್ಲೂಕು ಉಪ ಕಾರಾಗೃಹ, ಅರಸೀಕೆರೆ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 52. | ತಾಲ್ಲೂಕು ಉಪ ಕಾರಾಗೃಹ, ಚಿಕ್ಕಬಳ್ಳಾಪುರ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 53. | ತಾಲ್ಲೂಕು ಉಪ ಕಾರಾಗೃಹ, ತಿಪಟೂರು. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 54. | ತಾಲ್ಲೂಕು ಉಪ ಕಾರಾಗೃಹ, ನರಸಿಂಹರಾಜಪುರ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |
| 55. | ತಾಲ್ಲೂಕು ಉಪ ಕಾರಾಗೃಹ, ಹೂವಿನ ಹಡಗಲಿ. | ಅಧೀಕ್ಷಕರು | ಹೆಡ್ ವಾರ್ಡರ್ | ಕೇಂದ್ರ ಕಾರಾಗೃಹದ ಅಧೀಕ್ಷಕರು. |

ಈ ಅಧಿಸೂಚನೆಯ ಅಡಿಯಲ್ಲಿ ನೇಮಿಸಿರುವ ಸಾರ್ವಜನಿಕ ಮಾಹಿತಿ ಅಧಿಕಾರಿ/ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳು ಕೇಂದ್ರ ಸರ್ಕಾರದ ಮಾಹಿತಿ ಹಕ್ಕು ಕಾಯ್ದೆ 2005ರ ಸೆಕ್ಷನ್ 8 ಮತ್ತು 9ರಲ್ಲಿ ನೀಡಿರುವ ಸೂಚನೆಗಳನ್ನು ಹಾಗೂ ಸಂಸ್ಥೆಯ ಹಾಗೂ ಇಲಾಖೆಯ ಭದ್ರತೆ ಹಾಗೂ ಸುರಕ್ಷತೆಯನ್ನು ಗಮನದಲ್ಲಿಟ್ಟುಕೊಂಡು ಉಳಿದಂತೆ ಸದರಿ ಮಾಹಿತಿ ಹಕ್ಕು ಕಾಯ್ದೆ ನೀಡಿರುವ ಸೂಚನೆಗಳನ್ನು ಯಥಾವತ್ತಾಗಿ ಜಾರಿಗೆ ತಂದು ಪಾಲಿಸಲು ಸೂಚಿಸಿದೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು
ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು.

ಪಿ.ಆರ್.1564

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ

## ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:46: 2005-06, ದಿನಾಂಕ: 30ನೇ ಸೆಪ್ಟೆಂಬರ್ 2005

**ವಿಷಯ :** ಸಮಾಪನೆಗೊಂಡಿರುವ ಜವನಗೊಂಡನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಜವನಗೊಂಡನಹಳ್ಳಿ, ಹಿರಿಯೂರು ತಾಲ್ಲೂಕು. ಇದರ ರದ್ದತಿಯ ಬಗ್ಗೆ.

**ಉಲ್ಲೇಖ :**
1. ಸಹಕಾರ ಅಭಿವೃದ್ಧಿ ಅಧಿಕಾರಿ, ಚಿತ್ರದುರ್ಗ ಇವರ ಪ್ರಸ್ತಾವನೆ ಸಂಖ್ಯೆ: ಸ.ಅ.ಅಹಿ/ ರದ್ದತಿ/ ಸಿ.ಆರ್.03/ 05-06, ದಿನಾಂಕ: 19.09.2005.
2. ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ: ಡಿಆರ್‌ಡಿ/ ಎಡಿಎಂ/ ಎಲ್‌ಕ್ಯೂಡಿ/ ಸಿಆರ್ 46(11) 96-97, ದಿನಾಂಕ: 20.12.1996.

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೊಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರು ಮೇಲ್ಕಂಡ ಉಲ್ಲೇಖದಲ್ಲಿ (01) ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು ಕೊಡತಕ್ಕ ಮೊಬಲಗು ನಿವ್ವಳ ನಷ್ಟ ರೂ.............. ವಜಾ ಜಾತ ರೂ................ಮಾತ್ರ ಇದ್ದು ಹೋಕು

ಬಾಕಿಯಾಗಿರುವುದರಿಂದ ಅದರ ವಸೂಲಿಗೆ ಹಾಗೂ ವಿಲೇವಾರಿಗೂ ಯಾವ ರಹ ಇಲ್ಲದ್ದರಿಂದ ಆಸ್ತಿ ಜವಾಬ್ದಾರಿ ಇಲ್ಲವೆಂದು ದೃಢಪಟ್ಟಿದ್ದರಿಂದ ಇದರ ನೊಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಆದೇಶ**

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಂಡಬ್ಲ್ಯೂ:243:ಸಿಎಲ್ಎಂ 94 ದಿನಾಂಕ: 04.05.94ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕಾರಿಯಾದ ಶ್ರೀಮತಿ ಟಿ.ಓ.ಸುನಂದಮ್ಮ ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಜವನಗೊಂಡನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಜವನಗೊಂಡನಹಳ್ಳಿ ಈ ಸಂಘದ ಇದರ ನೊಂದಣಿ ಸಂಖ್ಯೆ: ಎಆರ್‌ಸಿಡಿ/445/ ಕ್ಯೂಸಿಎಸ್/ 4616/ 78-79, ದಿನಾಂಕ: 01.07.79ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದೂ ಪರಿಗಣಿಸತಕ್ಕದ್ದು. ಹೆಚ್ಚುವರಿ ಉಳಿದ ರೂ.........ಗಳನ್ನು............................ಇವರಿಗೆ ಪಾವತಿಸುವುದು/ ಠೇವಣಿ ಇಡತಕ್ಕದೆಂದು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ಅಂದರೆ 30.09.2005ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಚಿತ್ರದುರ್ಗ.

ಪಿ.ಆರ್.1565

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ

## ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:4: 98-99, ದಿನಾಂಕ: 30ನೇ ಸೆಪ್ಟೆಂಬರ್ 2005

**ವಿಷಯ :** ಸಮಾಪನೆಗೊಂಡಿರುವ ಆರನಕಟ್ಟೆ, ಎಣ್ಣೆ ಬೀಜದ ಬೆಳೆಗಾರರ ಸಹಕಾರ ಸಂಘ ನಿಯಮಿತ, ಆರನಕಟ್ಟೆ, ಹಿರಿಯೂರು ತಾಲ್ಲೂಕು, ಇದರ ರದ್ಧತಿಯ ಬಗ್ಗೆ.

**ಉಲ್ಲೇಖ :**
1. ಸಹಕಾರ ಅಭಿವೃದ್ಧಿ ಅಧಿಕಾರಿ ಹಿರಿಯೂರು ಇವರ ಪ್ರಸ್ತಾವನೆ ಸಂಖ್ಯೆ: ಸಿಡಿಓ/ ಹಿರಿಯೂರು/ ನೋಂದಣಿ ರದ್ಧತಿ/ 2005-06, ದಿನಾಂಕ: 26.09.2005.
2. ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ: ಡಿಆರ್‌ಡಿ/ ಎಲ್‌ಕ್ಯೂಡಿ/ ಸಿಆರ್ 14/ 1998-99, ದಿನಾಂಕ: 16.09.1998.

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೊಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರು ಮೇಲ್ಕಂಡ ಉಲ್ಲೇಖದಲ್ಲಿ (1) ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು ಕೊಡತಕ್ಕ ಮೊಬಲಗು ನಿವ್ವಳ ನಷ್ಟ ರೂ. 20020.00 ಜಾತ ರೂ.- ಮಾತ್ರ ಇದ್ದು ಹೋಕು ಬಾಕಿಯಾಗಿರುವುದರಿಂದ ಅದರ ವಸೂಲಿಗೆ ಹಾಗೂ ವಿಲೇವಾರಿಗೂ ಯಾವ ರಹ ಇಲ್ಲದ್ದರಿಂದ ಆಸ್ತಿ ಜವಾಬ್ದಾರಿ ಇಲ್ಲವೆಂದು ದೃಢಪಟ್ಟಿದ್ದರಿಂದ ಇದರ ನೊಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಆದೇಶ**

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಂಡಬ್ಲ್ಯೂ:243:ಸಿಎಲ್ಎಂ 94 ದಿನಾಂಕ: 04.05.94ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕಾರಿಯಾದ ಶ್ರೀಮತಿ ಟಿ.ಓ.ಸುನಂದಮ್ಮ ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಆರನಕಟ್ಟೆ ಎಣ್ಣೆ ಬೀಜದ ಬೆಳೆಗಾರರ ಸಹಕಾರ ಸಂಘ ನಿ., ಸಂಘದ ಇದರ ನೊಂದಣಿ ಸಂಖ್ಯೆ: ಎಆರ್ 30/ಬಿ/ ಆರ್‌ಜೆವಿಕ್/ 12908/ 88-89, ದಿನಾಂಕ: 26.02.88ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದೂ ಪರಿಗಣಿಸತಕ್ಕದ್ದು. ಹೆಚ್ಚುವರಿ ಉಳಿದ ರೂ.........ಗಳನ್ನು.......... ..................ಇವರಿಗೆ ಪಾವತಿಸುವುದು/ ಠೇವಣಿ ಇಡತಕ್ಕದೆಂದು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ಅಂದರೆ 30.09.2005ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಚಿತ್ರದುರ್ಗ.

ಪಿ.ಆರ್.1566

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ

## ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:37: 96-97, ದಿನಾಂಕ: 30ನೇ ಸೆಪ್ಟೆಂಬರ್ 2005

**ವಿಷಯ :** ಸಮಾಪನೆಗೊಂಡಿರುವ ಶ್ರೀದೇವಿ ಮಹಿಳಾ ವಿವಿಧೊದ್ದೇಶ ಸಹಕಾರ ಸಂಘ. ನಿ., ಹಿರಿಯೂರು ಟೌನ್, ಇದರ ರದ್ಧತಿಯ ಬಗ್ಗೆ.

**ಉಲ್ಲೇಖ :**
1. ಸಹಕಾರ ಅಭಿವೃದ್ಧಿ ಅಧಿಕಾರಿ ಹಿರಿಯೂರು ಇವರ ಪ್ರಸ್ತಾವನೆ ಸಂಖ್ಯೆ: ಸ.ಅ.ಅ. ನೋಂದಣಿ ರದ್ಧತಿ/ಸಿಆರ್.03/ 2005-06, ದಿನಾಂಕ: 19.09.2005.
2. ಈ ಕಛೇರಿಯ ಸಮಾಪನೆ ಆದೇಶ ಕ್ರಮಾಂಕ: ಡಿಆರ್‌ಡಿ/ ಎಲ್‌ಕ್ಯೂಡಿ/ ಸಿಆರ್ 37/ 1996-97, ದಿನಾಂಕ: 30.09.98.

**ಪೀಠಿಕೆ:**

ಪ್ರಸ್ತುತ ವಿಷಯದಲ್ಲಿ ನಮೂದಿಸಿದ ಸಹಕಾರ ಸಂಘದ ನೊಂದಣಿ ರದ್ದುಪಡಿಸುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರು ಮೇಲ್ಕಂಡ ಉಲ್ಲೇಖದಲ್ಲಿ (1) ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಮೀಕ್ಷಣೆ ಮಾಡಲಾಗಿ ಸಂಘಕ್ಕೆ ಬರತಕ್ಕ ಮತ್ತು ಸಂಘವು ಕೊಡತಕ್ಕ ಮೊಬಲಗು ನಿವ್ವಳ ನಷ್ಟ ರೂ.0.62 ವಜಾ ಜಾತ ರೂ.0.16 ಮಾತ್ರ ಇದ್ದು ಹೋಕು ಬಾಕಿಯಾಗಿರುವುದರಿಂದ ಅದರ ವಸೂಲಿಗೆ ಹಾಗೂ ವಿಲೇವಾರಿಗೂ ಯಾವ ರಹ ಇಲ್ಲದ್ದರಿಂದ ಆಸ್ತಿ ಜವಾಬ್ದಾರಿ ಇಲ್ಲವೆಂದು ದೃಢಪಟ್ಟಿದ್ದರಿಂದ ಇದರ ನೊಂದಣಿಯನ್ನು ರದ್ದು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಅವರ ಶಿಫಾರಸ್ಸನ್ನು ಪರಾಂಭರಿಸಿ ಈ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಆದೇಶ**

ಮೇಲ್ಕಂಡ ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಂಡಬ್ಲ್ಯೂ:243:ಸಿಎಲ್ಎಂ 94 ದಿನಾಂಕ: 04.05.94ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಧಿಕಾರಿಯಾದ ಶ್ರೀಮತಿ ಟಿ.ಒ.ಸುನಂದಮ್ಮ ಆದ ನಾನು ಪರಿಸಮಾಪನೆಗೊಳಿಸಲ್ಪಟ್ಟಿದ್ದ ಶ್ರೀದೇವಿ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಹೊಸದುರ್ಗ, ಸಂಘದ ಇದರ ನೊಂದಣಿ ಸಂಖ್ಯೆ: ಎಆರ್‌ಸಿ 30/ನೋಂದಣಿ/ 9077/ಡಿಆರ್ 42/ 92-93, ದಿನಾಂಕ: 30.04.92ಯನ್ನು ರದ್ದುಗೊಳಿಸಿ ಈ ಮೂಲಕ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಅನ್ವಯ ಈ ದಿನಾಂಕದಿಂದ ಸದರಿ ಸಂಘವು ವಿಸರ್ಜಿಸಲ್ಪಟ್ಟಿತೆಂದೂ ಮತ್ತು ಸದರಿ ಸಂಘದ ಅಸ್ತಿತ್ವ ಇಲ್ಲವೆಂದೂ ಪರಿಗಣಿಸತಕ್ಕದ್ದು. ಹೆಚ್ಚುವರಿ ಉಳಿದ ರೂ.........ಗಳನ್ನು............................ಇವರಿಗೆ ಪಾವತಿಸುವುದು/ ಠೇವಣಿ ಇಡತಕ್ಕದೆಂದು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಹುದ್ದೆಯ ಮುದ್ರೆಯೊಂದಿಗೆ ಈ ದಿನ ಅಂದರೆ 30.09.2005ರಂದು ಆದೇಶ ನೀಡಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಚಿತ್ರದುರ್ಗ.

ಪಿ.ಆರ್.1567

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಬಳ್ಳಾರಿ ಇವರ ನಡಾವಳಿ

**ಉಪಸ್ಥಿತರು:** ಶ್ರೀ ಡಿ. ಸಿದ್ದಲಿಂಗೇಶ್ವರ
ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ.

**ವಿಷಯ :** ವಾಹನ ಸಂಖ್ಯೆ: ಎಂವೈವೈ 9668, ವಾಹನದ ನೋಂದಣಿ ರದ್ದುಪಡಿಸುವಿಕೆ ಬಗ್ಗೆ.

**ಉಲ್ಲೇಖ :** 1. ವಾಹನ ಮಾಲೀಕರ ಅರ್ಜಿ ದಿನಾಂಕ: 16.09.2005.
2. ವಾಹನ ನಿರೀಕ್ಷಕರ ವರದಿ ದಿನಾಂಕ: 23.08.2004.

**ಪ್ರಸ್ತಾವನೆ:**

ಮೋಟಾರು ವಾಹನ ಸಂಖ್ಯೆ: ಎಂವೈವೈ 9668 ತೆರಿಗೆ ವಿನಾಯಿತಿ ನೀಡಿದ್ದು, ವಾಹನದ ಮಾಲೀಕರು ವಾಹನದ ತೆರೆಗೆಯನ್ನು ಅವಧಿ 31.03.06 ವರೆಗೆ ತೆರಿಗೆ ವಿನಾಯಿತಿ ನೀಡಿದ್ದು, ವಾಹನವು ಹಾಗೂ ರಿಪೇರಿಯಾಗದ ಸ್ಥಿತಿಯಲ್ಲಿ ಎಂಬ ಕಾರಣ ನೀಡಿ ನೋಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಈ ಕಛೇರಿಯ ವಾಹನ ನಿರೀಕ್ಷಕರು ತಮ್ಮ ವರದಿ ದಿನಾಂಕ: 23.08.2004ರಲ್ಲಿ ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ಈ ಮೇಲಿನ ಅಂಶಗಳನ್ನು ಪರಿಗಣಿಸಿ, ಸದರಿ ವಾಹನದ ಮೇಲೆ ತೆರಿಗೆ ಬಾಕಿ, ಲೆಕ್ಕ ಪತ್ರ, ತನಿಖಾ ಟಿಪ್ಪಣಿ ಅಥವಾ ಡಿ.ಎಸ್.ಎ. ಪ್ರಕರಣಗಳು ಏನಾದರೂ ಬಾಕಿಯಿರುವುದು ಕಂಡು ಬಂದಲ್ಲಿ ಸದರಿ ವಾಹನದ ಮಾಲೀಕರೆ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ದಿನಾಂಕ: 17.09.2005ರಿಂದ ಅನ್ವಯವಾಗುವಂತೆ ನೊಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಪ್ರಾಸಾಲ:ಬಳ್ಳಾರಿ:ನೊಂದಣಿ: ಎಂವೈವೈ 9668:05-06, ದಿನಾಂಕ: 17ನೇ ಸೆಪ್ಟೆಂಬರ್, 2005**

ಮೇಲ್ಕಂಡ ವಿಷಯವನ್ನು ಪರಿಗಣಿಸಿ ಮೋಟಾರು ವಾಹನ ಕಾಯ್ದೆ 1988ರ ಕಲಂ 55ರಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಆದ ನಾನು ವಾಹನ ಸಂಖ್ಯೆ: ಎಂವೈವೈ 9668 ವಾಹನದ ನೊಂದಣಿಯನ್ನು ದಿನಾಂಕ: 17.09.2005 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೊಂದಣಿಯನ್ನು ವಾಹನದ ಮೇಲೆ ಸರಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಮಾಲೀಕರೇ ಪಾವತಿಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

| | |
|---|---|
| 1) ನೊಂದಣಿ ಸಂಖ್ಯೆ | : ಎಂವೈವೈ 9668 |
| 2) ವಾಹನದ ವರ್ಗ | : ಮೋಟಾರ್ ಸೈಕಲ್. |
| 3) ತಯಾರಕರ ಹೆಸರು | : Enfield. |
| 4) ಅಡಿಗಟ್ಟು ಸಂಖ್ಯೆ | : B/166235/7cx |
| 5) ಯಂತ್ರದ ಸಂಖ್ಯೆ | : 166235 |
| 6) ಮಾಲೀಕರ ಹೆಸರು ವಿಳಾಸ | : Supdl. of Police, Bellary. |

ಪ್ರಾದೇಶಿಕ ಸಾರಿಗೆ ಅಧಿಕಾರಿ,
ಬಳ್ಳಾರಿ.

ಪಿ.ಆರ್.1568

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು

**ವಿಷಯ :** ಶ್ರೀಮತಿ ಆರೋಗ್ಯ ಮೇರಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಪ್ರಾಥಮಿಕ ಆರೋಗ್ಯ ಕೇಂದ್ರ ಜಾಲಹಳ್ಳಿ, ರಾಯಚೂರು ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಇಲಾಖಾ ವಿಚಾರಣೆ ಅಂತಿಮ ಆದೇಶ.

**ಓದಲಾಗಿದೆ :** 1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್ (18) ಸಿಆರ್: 308:79-80, ದಿನಾಂಕ: 15.02.80 ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ:

2. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್ (18) ಸಿಆರ್:308:79-80, ದಿನಾಂಕ: 19.02.01.
3. ವಿಚಾರಣಾ ವರದಿಯ ಸಂಖ್ಯೆ: ಮುಜಾಅ: ಜಾಕೋ: ಎನ್‌ಬಿ: 130: 00-01 ದಿನಾಂಕ: 13.09.04.
4. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್ (18) ಸಿಆರ್:308:79-80 ದಿನಾಂಕ: 25.10.04.
5. ಪತ್ರಿಕಾ ಪ್ರಕಟಣೆ ದಿನಾಂಕ: 01.06.2005.

**ಪ್ರಸ್ತಾವನೆ:**

ಶ್ರೀಮತಿ ಆರೋಗ್ಯ ಮೇರಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ ಜಾಲಹಳ್ಳಿ, ರಾಯಚೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 05.09.77 ರಿಂದ ದಿನಾಂಕ: 07.08.79 ರವರೆಗೆ ಅನಧಿಕೃತ ಗೈರು ಹಾಜರಿ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ, ಆದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2)ರಲ್ಲಿನ ಆದೇಶದಲ್ಲಿ ವಿಶೇಷಾಧಿಕಾರಿಗಳು (ಜಾಗೃತ ದಳ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (3)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (4) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (5)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸದೇ ಇರುವುದರಿಂದ ರಾಜ್ಯದ ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ದಿನಾಂಕ: 01.06.2005ರಂದು ಪ್ರಕಟಿಸಲಾಗಿಯೂ ನೌಕರರು ತಮ್ಮ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ.

ಆದಕಾರಣ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (18) ಸಿಆರ್: 308:79-80, ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್, 2005**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಬೆನಿಟಾ. ವಿ. ಡೇವಿಡ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು ಆದ ನಾನು ಶ್ರೀಮತಿ ಆರೋಗ್ಯ ಮೇರಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಜಾಲಹಳ್ಳಿ, ರಾಯಚೂರು ಇವರು ದಿನಾಂಕ: 05.09.77 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಾಗಿರುವುದು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ದಂಡನೆಯಾಗಿ ಸದರಿ ನಿಯಮ 8(viii)ರ ಪ್ರಕಾರ ನೌಕರರು ಪುನಃ ಸರ್ಕಾರಿ ಸೇವೆಗೆ ಅನರ್ಹರಾಗತಕ್ಕ ರೀತಿಯಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿದ್ದೇನೆ.

ಆಯುಕ್ತರ ಆದೇಶದ ಮೇರೆಗೆ ಹಾಗೂ ಅವರ ಹೆಸರಿನಲ್ಲಿ,
**ಡಾ: ಬೆನಿಟಾ ವಿ. ಡೇವಿಡ್,**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

ಪಿ.ಆರ್.1569

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ**

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ :** ವಾಹನ ಸಂಖ್ಯೆ: ಕೆಎ-15-172 (S/c) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಮಾಲೀಕರು ಶ್ರೀ ತರೀನ್ ಅಂಜುಮ್ ಖಲೀಲ್ ಮೊಹಮನಲ್ ಇವರ ಅರ್ಜಿ ದಿನಾಂಕ: 27.06.05.
2. ಅಧ್ಯರ್ಪ ಸಂಖ್ಯೆ: 08/05-06 ದಿನಾಂಕ: 01.06.2005.
3. ಮೋಟಾರು ವಾಹನ ನಿರೀಕ್ಷಕರ ವರದಿ ದಿನಾಂಕ: 04.07.2005.

ಈ ಕಛೇರಿಯ ದಾಖಲೆಗಳಂತೆ ವಾಹನ ಸಂಖ್ಯೆ: ಕೆಎ-15-172 ಇದರ ನೊಂದಾಯಿತ ಮಾಲೀಕರಾದ ಶ್ರೀ ತರೀನ್ ಅಂಜುಮ್ ಖಲೀಲ್ ಮೊಹಮನಲ್ ರವರು ಸದರಿ ವಾಹನದ ತೆರಿಗೆಯನ್ನು 31.05.2005 ರವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತಿ ಪಡೆಯಲು ಸದರಿ ವಾಹನದ ಅನುಪಯೋಗದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆಗಳನ್ನು ಅಧ್ಯರ್ಪಣ ಸಂಖ್ಯೆ: 08.05.2006ರಲ್ಲಿ ದಿನಾಂಕ: 01.06.2005 ರಿಂದ ಅಧ್ಯರ್ಪಣ ಮಾಡಿದ್ದು, ಇಂದಿಗೂ ಅಧ್ಯರ್ಪಣ ಮುಂದುವರೆದಿದೆ.

ಕಛೇರಿಗೆ ದಿನಾಂಕ: 27.06.2005 ರಂದು ಅರ್ಜಿ ಸಲ್ಲಿಸಿ ಈ ವಾಹನವು 1990 ರ ಮಾಡೆಲ್ ಆಗಿದ್ದು ರಸ್ತೆಯಲ್ಲಿ ಓಡಿಸಲು ಅನರ್ಹವಿರುವುದಾಗಿ ಮಾಹಿತಿ ನೀಡಿ ನೊಂದಣಿ ರದ್ದುಪಡಿಸಲು ಕೋರಿರುತ್ತಾರೆ. ಪೂರಕವಾಗಿ ಈ ಕಛೇರಿಯಿಂದ ಮೋಟಾರು ವಾಹನ ನಿರೀಕ್ಷಕರವರು ಈ ವಾಹನದ ಸ್ಥಿತಿಗತಿ ಪರಿಶೀಲಿಸಿ ಕಛೇರಿಗೆ ದಿನಾಂಕ: 04.07.2005ರಂದು ಸಲ್ಲಿಸಿದ ವರದಿಯಲ್ಲಿ ಈ ವಾಹನದ ನೋಂದಣಿ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

**ಆದೇಶ**

**ಸಂಖ್ಯೆ: ಪ್ರಾಸಾಅ: ಚಿಮ: ಎಫ್‌ಟಿ: ಸಾರಿಗೆ:05-06, ದಿನಾಂಕ: 5ನೇ ಜುಲೈ, 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್.ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂಖ್ಯೆ: ಕೆಎ-15-172 ಮಾರುತಿ ವ್ಯಾನ್ ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

1) ವಾಹನ ಸಂಖ್ಯೆ : ಕೆಎ-15-172
2) ವಾಹನದ ವರ್ಗ : ಮಾರುತಿ ವ್ಯಾನ್.
3) ಮಾಡೆಲ್ : 1990
4) ತಯಾರಿಕೆ :
5) ಚಾಸಿಸ್ ಸಂಖ್ಯೆ : ALAP 10655
6) ಯಂತ್ರ ಸಂಖ್ಯೆ : ALHP 4443
7) ತೆರಿಗೆ ಪಾವತಿ :
8) ಹೆಚ್‌ಪಿಎ : 31.05.2005
9) ನೋಂದಣಿ ದಿನಾಂಕ : 04.09.1990
10) ಎಸ್.ಆರ್. ಸಂಖ್ಯೆ : 08/0516 ದಿನಾಂಕ: 01.06.2005
11) ಮಾಲೀಕರು ಶ್ರೀ Tammem Anjum, S/o CM Hillal Ahmed Khaleel mojod.

ಆರ್. ರಾಜಶೇಖರ್
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ
ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

ಪಿ.ಆರ್.1570

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ತುಮಕೂರು ಜಿಲ್ಲೆ, ಇವರ ನಡವಳಿಕೆಗಳು

**ವಿಷಯ :** ಶ್ರೀ ನರಸೀಯಪ್ಪ ಬಿನ್ ನಲ್ಲನಾಯ್ಕ, ಕಂಪಾನಹಳ್ಳಿ, ಚಿಕ್ಕಮಾಲೂರು ಅಂಚೆ ಮಧುಗಿರಿ ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ದಿನಾಂಕ: 01.12.2004ರಂದು ನಡೆದ ಬಹಿರಂಗ ಹರಾಜು ಮಾರಾಟದಲ್ಲಿ ಖರೀದಿಸಿರುವ ಸ್ಥಿರಸ್ವತ್ತನ್ನು ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮಧುಗಿರಿ ಈ ಸಂಘದ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ :**
1. ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಮಧುಗಿರಿ ಇವರ ಪ್ರಸ್ತಾವನೆ ಪತ್ರದ ಕ್ರಮಾಂಕ ಸ.ನಿ. 33:ಮಾ.ಅ:13:ಇಡಿ:2004-05, ದಿನಾಂಕ: 20.12.2004.
2. ಈ ಕಛೇರಿಯ ಸಮಸಂಖ್ಯೆ: ತಪತ್ರದ ನಂ.ಸ.ಸಂ.ನ.ನಿ.33:ಎಬಿಎಸ್: ಇಎಕ್ಸ್‌ಎನ್: ಸೇವೆ:60:04-05, ದಿನಾಂಕ: 05.01.2005.
3. ಕಾರ್ಯದರ್ಶಿ ಟಿ.ಎ.ಪಿ.ಸಿ.ಎಂ.ಎಸ್.ಲಿ. ಮಧುಗಿರಿ ಇವರ ವರದಿ ಪತ್ರದ ನಂ.1020: 2004-05 ದಿನಾಂಕ: 17.02.2005 ಮತ್ತು 08.08.2005.

ತುಮಕೂರು ಜಿಲ್ಲೆ ಮಧುಗಿರಿ ತಾಲ್ಲೂಕು ಮಧುಗಿರಿ ಟೌನ್‌ನಲ್ಲಿರುವ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮಧುಗಿರಿ ಈ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ನಿಯಮಗಳು 1960ರ ಅನ್ವಯ ನೊಂದಾವಣೆ ಆಗಿದ್ದು, ನೋಂದಣಿಗೊಂಡ ಉಪನಿಯಮಗಳ ಅನ್ವಯ ಕಾರ್ಯನಿರ್ವಹಿಸುತ್ತಿದೆ. ಈ ಸಹಕಾರ ಸಂಘಗಳ ಮಾಜಿ ಮಾರಾಟ ಗುಮಾಸ್ತರಾಗಿದ್ದ ನರಸೀಯಪ್ಪನವರು ಸಂಘದ ಹಣವನ್ನು ದುರುಪಯೋಗ ಮಾಡಿದ್ದು ಇವರ ಮೇಲೆ ಸಹಕಾರಿ ಕಾಯ್ದೆ ಕಲಂ 69ರ ಅಡಿಯಲ್ಲಿ ಅದಿಭಾರ ಅರ್ಜಿ ಸಂಖ್ಯೆ: 25:83-84ರ ರೀತ್ಯಾ ದಾವೆಯನ್ನು ಹೂಡಿ ದಿನಾಂಕ: 31.12.1988ರಂದು ರೂ.4899-78 ಮತ್ತು ಶೇ 5ರಂತೆ ಬಡ್ಡಿ ಸೇರಿಸಲು ಡಿಕ್ರಿ ನೀಡಿರುತ್ತದೆ. ನಂತರ ಅಮಲ್ಜಾರಿ ನಂ.390:88-89 ದಿನಾಂಕ: 31.06.1989ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರದಲ್ಲಿ ಅಮಲ್ಜಾರಿ ರೂ.6359-10 ಗಳಿಗೆ ದಾಖಲಾಗಿರುತ್ತದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವು ಸಂಘಕ್ಕೆ ಜಮವಾಗದೆ ಇದ್ದ ಕಾರಣದಿಂದ ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ಸಂಖ್ಯೆ: 390:88-89ರ ಅಮಲ್ಜಾರಿ ಅರ್ಜಿಯನ್ನು ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಮಧುಗಿರಿ ಉಪವಿಭಾಗ, ಮಧುಗಿರಿ ಇವರಿಗೆ ವಸೂಲಿ ಕ್ರಮ ಕೈಗೊಳ್ಳಲು ಈ ಕಡತವನ್ನು ವಹಿಸಲಾಗಿತ್ತು. ಮಾರಾಟಾಧಿಕಾರಿಯವರು ವಸೂಲಾತಿ ಕ್ರಮದ ಅಡಿಯಲ್ಲಿ ನಿಗದಿತವಾದ ಫಾರಂ ನಂ.2 ಮತ್ತು 60 ನೋಟೀಸ್‌ಗಳನ್ನು ಅನೇಕಬಾರಿ ಜಾರಿ ಮಾಡಿಸಿ ವಸೂಲಿಗಾಗಿ ಯತ್ನಿಸಿರುತ್ತಾರೆ. ಆದಾಗ್ಯೂ ದುರುಪಯೋಗದ ಹಣ ವಸೂಲಾಗಿರುವುದಿಲ್ಲ. ಆಗ ಮಾರಾಟಾಧಿಕಾರಿಯವರು ವಸೂಲಿ ಕ್ರಮ ಮುಂದುವರೆಸಿ ಪ್ರತಿವಾದಿಗೆ ಸಂಬಂಧಪಟ್ಟ ಸ್ಥಿರ ಸ್ವತ್ತನ್ನು ದಿನಾಂಕ: 01.12.2004 ರಂದು ಬಹಿರಂಗ ಹರಾಜು ನೆಡೆಸಲು ಗುರಿಪಡಿಸಲಾಗಿದೆ. ಈ ಸಂಬಂಧದ ಫಾರಂ ನಂ.8, 9 ಮತ್ತು ಹರಾಜು ಇಸ್ತಿಹಾರ್‌ಗಳನ್ನು ತೀರ್ಪಿನ ಋಣಿದಾರರಿಗೆ ಜಾರಿಗೊಳಿಸಿರುತ್ತದೆ. ಆಗ ಬಹಿರಂಗ ಹರಾಜನ್ನು ದಿನಾಂಕ: 01.12.2004 ರಂದು ನಡೆಸಲಾಗಿದ್ದು ಈ ಹರಾಜಿಗೆ ಬಿಡ್‌ದಾರರು ಬಾರದೇ ಇರುವುದರಿಂದ ಡಿಕ್ರಿಬಾಕಿದಾರನ ಸ್ಥಿರ ಸ್ವತ್ತನ್ನು ಸಂಘಕ್ಕೆ ಬರಬೇಕಾದ ಅಸಲು, ಬಡ್ಡಿ ಅಮಲ್ಜಾರಿ ಶುಲ್ಕ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ.7557-80 ದಿನಾಂಕ: 30.12.2004ಕ್ಕೆ ಬಾಕಿ ಇರುವುದಾಗಿ ಚೆಕ್‌ಲಿಸ್ಟ್‌ನಿಂದ ತಿಳಿದು ಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಯನ್ನು ಕಕ್ಷಿದಾರನ ವಾದಿ ಸಂಘಕ್ಕೆ ವರ್ಗಾಯಿಸಲು ವಿವರವಾದ ನೋಟೀಸನ್ನು ಉಲ್ಲೇಖ 2ರ ರೀತ್ಯಾ ನೀಡಲಾಗಿತ್ತು ಆದರೆ ವರ್ಗಾವಣೆ ಬಗ್ಗೆ ಯಾವುದೇ ವಿಧವಾದ ತಕರಾರು ಅರ್ಜಿ ಸಹ ಬಂದಿರುವುದಿಲ್ಲ ಮತ್ತು ಅಮಲ್ಜಾರಿ ಮೊಬಲಗನ್ನು ಸಹ ಮರುಪಾವತಿ ಮಾಡಿರುವುದಿಲ್ಲ ಈ ಬಗೆಗೆ ಉಲ್ಲೇಖ 3ರ ರೀತಿ ವರದಿ ಪಡೆಯಲಾಗಿದೆ. ಆದ್ದರಿಂದ ಮಾರಾಟಾಧಿಕಾರಿಗಳು ಇವರು ಬಿಡ್‌ದಾರರು ಯಾರೂ ಬರಲಿಲ್ಲವಾದ ಕಾರಣದಿಂದ ಸಂಘದ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶಃ ಸ್ಥಿರ ಸ್ವತ್ತನ್ನು ಡಿಕ್ರಿ ಹೊಂದಿದ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ. ಮಧುಗಿರಿ ತುಮಕೂರು ಜಿಲ್ಲೆ ಇದರ ಹೆಸರಿಗೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

### ಆದೇಶ

### ಸಂಖ್ಯೆ: ಸ.ನಿ.33:ಎಜಿಎನ್:ಇಎಕ್ಸ್‌ಎನ್:ಸೇಲ್ 60:2004-05, ದಿನಾಂಕ: 17ನೇ ಸೆಪ್ಟೆಂಬರ್, 2005

ಶ್ರೀ ಆರ್. ಲೋಕೇಶ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಂಘಗಳ ಕಾಯ್ದೆ 1959ರ ಕಲಂ 101 ಬಿರ 4 ಅನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ.ಸಿ.ಎಂ.ಡಬ್ಲ್ಯೂ.:69:ಸಿಎಲ್‌ಎಂ:

2001 ದಿನಾಂಕ:21.11.2001ರ ರೀತ್ಯಾ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ನರಸೀಯಪ್ಪ ಬಿನ್ ನಲ್ಲನಾಯ್ಕ ಕಂಸಾನಹಳ್ಳಿ, ಚಿಕ್ಕಮಾಲೂರು ಅಂಚೆ, ಮಧುಗಿರಿ ತಾಲ್ಲೂಕು ಇವರ ಖುಷ್ಕಿ ಜಮೀನಿನ ವಿಸ್ತೀರ್ಣ 11-05 ಎಕರೆ, ಸರ್ವೆ ನಂ.401, ಚೆಕ್ಕುಬಂದಿ ಪೂರ್ವಕ್ಕೆ ವೆಂಕಟಪ್ಪ ಬಿನ್ ವೆಂಕಟರಮಣಪ್ಪ, ಕಂಸಾನಹಳ್ಳಿರವರಿಗೆ ಸೇರಿದ ಜಮೀನು, ಪಶ್ಚಿಮಕ್ಕೆ ಶ್ರೀ ನರಸಿಂಹಯ್ಯ ಬಿನ್ ಉಗ್ರನರಸಪ್ಪ, ಕಂಸಾನಹಳ್ಳಿ ಇವರಿಗೆ ಸೇರಿದ ಜಮೀನು, ಉತ್ತರಕ್ಕೆ ಶ್ರೀ ರಾಮಯ್ಯ, ಕೊಂಡವಾಡಿ ಇವರಿಗೆ ಸೇರಿದ ಜಮೀನು, ಮತ್ತು ದಕ್ಷಿಣಕ್ಕೆ ಗೋವಿಂದಪ್ಪ ಕೊಂಡವಾಡಿ ಇವರಿಗೆ ಸೇರಿದ ಜಮೀನು, ಈ ಸ್ಥಿರಾಸ್ತಿಯನ್ನು ವಾದಿ ಸಂಘದ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯ್ದೆ ಅನ್ವಯ ನಮೂನೆ 8ನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಈ ಕಛೇರಿಯ ಮೊಹರು ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 17.09.2005ರಂದು ಈ ಸ್ಥಿರಸ್ವತ್ತನ್ನು ವರ್ಗಾವಣೆ ಮಾಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ-38ಎ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾರೆಯ ಬಗ್ಗೆ**

**ಪ್ರಮಾಣಪತ್ರ**

ತುಮಕೂರು ಜಿಲ್ಲಾ ಮಧುಗಿರಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ. ಮಧುಗಿರಿ ಇದರ ಕಾರ್ಯದರ್ಶಿ ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ನರಸೀಯಪ್ಪ ಬಿನ್ ನಲ್ಲನಾಯ್ಕ ಕಂಸಾನಹಳ್ಳಿ, ಚಿಕ್ಕಮಾಲೂರು ಅಂಚೆ ಮಧುಗಿರಿ ತಾಲ್ಲೂಕು ಇವರ ಸ್ಥಿರ ಸ್ವತ್ತಿನ ಮಾರಾಟದ ಬಗ್ಗೆ ದಿನಾಂಕ: 01.12.2004ರಂದು ಬಹಿರಂಗ ಹರಾಜು ಇಟ್ಟಿದ್ದು ಹರಾಜಿನಲ್ಲಿ ಕೊಂಡು ಕೊಳ್ಳುವವರು ಯಾರೂ ಬರಲಿಲ್ಲವಾದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮಧುಗಿರಿ, ತುಮಕೂರು ಜಿಲ್ಲೆ ಈ ಸಂಘದಲ್ಲಿ ನಿರ್ಧಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಮಧುಗಿರಿ ಇದಕ್ಕೆ ತಪ್ಪಿಸ ತಕ್ಕದ್ದೆಂದು ಸದರಿ ಅಧಿನಿಯಮದ 101 ಬಿ ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ**

| ಕ್ರ. ಸಂ. | ಖಾತೆದಾರನ: ಹಕ್ಕುದಾರನ ಹೆಸರು ಮತ್ತು ವಿಳಾಸ | ಸರ್ವೆ ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|
| 1. | ನರಸೀಯಪ್ಪ ಬಿನ್ ನಲ್ಲನಾಯ್ಕ, ಕಂಸಾನಹಳ್ಳಿ ಚಿಕ್ಕಮಾಲೂರು ಅಂಚೆ, ಮಧುಗಿರಿ ತಾಲ್ಲೂಕು. | 401 | 11.05 | ಖುಷ್ಕಿ | ಪೂರ್ವ: ವೆಂಕಟಪ್ಪ ಕಂಸಾನಹಳ್ಳಿ.<br>ಪಶ್ಚಿಮ: ನರಸಿಂಹಯ್ಯ ಕಂಸಾನಹಳ್ಳಿ.<br>ಉತ್ತರ: ಶ್ರೀರಾಮಯ್ಯ ಕೊಂಡವಾಡಿ.<br>ದಕ್ಷಿಣ: ಗೋವಿಂದಪ್ಪ ಕೊಂಡವಾಡಿ. |

**ಷರತ್ತು ಮತ್ತು ನಿಯಮಗಳು:**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಸಂಘವೇ ಉಪಯೋಗಿಸತಕ್ಕದ್ದು.
2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.
3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಸಂಘದಲ್ಲಿ ಜಮ ಖರ್ಚು ಮಾಡಿಕೊಳ್ಳತಕ್ಕದ್ದು.

ಸ್ಥಳ: ಮಧುಗಿರಿ
ದಿನಾಂಕ: 17.09.2005

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್.1571 ಮಧುಗಿರಿ ಉಪವಿಭಾಗ, ಮಧುಗಿರಿ-572132.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ತುಮಕೂರು ಜಿಲ್ಲೆ, ಇವರ ನಡವಳಿಕೆಗಳು**

**ವಿಷಯ :** ಶ್ರೀ ಜಿ. ರಂಗಸ್ವಾಮಿ ಬಿನ್ ದನ್ನಪ್ಪ ಛತ್ರಪಾಳ್ಯ, ಹನುಮಂತಪುರ ಅಂಚೆ, ಮಧುಗಿರಿ ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ದಿನಾಂಕ: 02.12.2004ರಂದು ನಡೆದ ಬಹಿರಂಗ ಹರಾಜು ಮಾರಾಟದಲ್ಲಿ ಖರೀದಿಸಿರುವ ಸ್ಥಿರಸ್ವತ್ತನ್ನು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹನುಮಂತಪುರ ಮಧುಗಿರಿ ತಾಲ್ಲೂಕು ಈ ಸಂಘದ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ :**
1. ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಮಧುಗಿರಿ ಇವರ ಪ್ರಸ್ತಾವನೆ ಪತ್ರದ ಕ್ರಮಾಂಕ ಸನಿ:33:ಮಾ.ಅ.13:ಇ.ಪಿ.: 2004-05 ದಿನಾಂಕ: 18.12.2004.
2. ಈ ಕಛೇರಿಯ ಸಮಸಂಖ್ಯೆ ಪತ್ರದ ಸಂಖ್ಯೆ: ಸ.ನಂ.ಸ.ನಿ.33:ಎಟಿಎನ್: ಇಎಕ್ಸ್‌ಎನ್:ಸೇಲ್:59: 2004-05 ದಿನಾಂಕ: 05.01.2005.
3. ಕಾರ್ಯದರ್ಶಿ, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹನುಮಂತಪುರ ಮಧುಗಿರಿ ತಾಲ್ಲೂಕು ಇವರ ವರದಿ ಪತ್ರದ ದಿನಾಂಕ: 01.06.2005.

ತುಮಕೂರು ಜಿಲ್ಲೆ ಮಧುಗಿರಿ ತಾಲ್ಲೂಕು ಹನುಮಂತಪುರದಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹನುಮಂತಪುರ ಈ ಸಂಘವು ಕರ್ನಾಟಕ ಸಹಕಾರ ಕಾಯ್ದೆ 1959 ನಿಯಮ 1960ರ ಅನ್ವಯ ನೊಂದಾವಣೆಯಾಗಿದ್ದು, ನೋಂದಾವಣೆಗೊಂಡ ಉಪನಿಯಮಗಳ ಅನ್ವಯ ಕಾರ್ಯನಿರ್ವಹಿಸುತ್ತಿದೆ. ಈ ಸಹಕಾರ ಸಂಘ ಮಾಜಿ ಕಾರ್ಯದರ್ಶಿಯಾಗಿದ್ದ ಶ್ರೀ ಜಿ.ರಂಗಸ್ವಾಮಿಯವರು ಸಂಘದ ಹಣವನ್ನು ದುರುಪಯೋಗ ಮಾಡಿದ್ದು ಇವರ ಮೇಲೆ ಸಹಕಾರಿ ಕಾಯ್ದೆ ಕಲಂ 69ರ ಅಡಿಯಲ್ಲಿ ಅದಿಭಾರ ಅರ್ಜಿ ಸಂಖ್ಯೆ: 48:1992-93ರ ರೀತ್ಯಾ ದಾವೆಯನ್ನು ಹೂಡಿ ದಿನಾಂಕ: 16.09.1998ರಂದು ರೂ 36757-67 ಮತ್ತು ಶೇ.12ರಂತೆ ಬಡ್ಡಿ ಸೇರಿಸಲು ಡಿಕ್ರಿ ನೀಡಿರುತ್ತದೆ. ನಂತರ ಇದು ಅಮಲ್ಜಾರಿ ಸಂಖ್ಯೆ: 114:2002-03 ದಿನಾಂಕ: 17.10.2002ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರದಲ್ಲಿ ಅಮಲ್ಜಾರಿ ರೂ.59193-57ಗಳಿಗೆ ದಾಖಲಾಗಿರುತ್ತದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವು ಸಂಘಕ್ಕೆ ಜಮ ಆಗದೆ ಇದ್ದ ಕಾರಣದಿಂದ ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ಸಂಖ್ಯೆ: 390:88-89ರ ಅಮಲ್ಜಾರಿ ಅರ್ಜಿಯನ್ನು ಮಾರಾಟಾಧಿಕಾರಿಗಳು ಇದೇ ಕಛೇರಿ ಇವರಿಗೆ ವಸೂಲಿ ಕ್ರಮ ಕೈಗೊಳ್ಳಲು ಈ ಕಡತವನ್ನು ವಹಿಸಲಾಗಿತ್ತು. ಮಾರಾಟಾಧಿಕಾರಿಯವರು ವಸೂಲಿ ಕ್ರಮದ ಅಡಿಯಲ್ಲಿ ನಿಗದಿತವಾದ ಫಾರಂ ನಂ.2 ಮತ್ತು 6ರ ನೋಟೀಸ್‌ಗಳನ್ನು ಅನೇಕ ಬಾರಿ ಜಾರಿ ಮಾಡಿಸಿ ವಸೂಲಿಗಾಗಿ ಯತ್ನಿಸಿರುತ್ತಾರೆ. ಆದಾಗ್ಯೂ ದುರುಪಯೋಗದ ಹಣ ವಸೂಲಾಗಿರುವುದಿಲ್ಲ. ಆಗ ಮಾರಾಟಾಧಿಕಾರಿಯವರು ವಸೂಲಿ ಕ್ರಮ ಮುಂದುವರಿಸಿ ಪ್ರತಿವಾದಿಗೆ ಸಂಬಂಧಪಟ್ಟ ಸ್ಥಿರ ಸ್ವತ್ತನ್ನು ದಿನಾಂಕ: 02.12.2004 ರಂದು ಬಹಿರಂಗ ಹರಾಜು ನಡೆಸಲು ಗುರಿ ಪಡಿಸಲಾಗಿದೆ. ಈ ಸಂಬಂಧದ ಫಾರಂ ನಂ.8, 9 ಮತ್ತು ಹರಾಜು ಇಸ್ತಿಹಾರ್‌ಗಳನ್ನು ತೀರ್ಪಿನ ಋಣಿದಾರರಿಗೆ ಜಾರಿಗೊಳಿಸಿರುತ್ತದೆ. ಆಗ ಬಹಿರಂಗ ಹರಾಜನ್ನು ದಿನಾಂಕ: 02.12.2004 ರಂದು ನಡೆಸಲಾಗಿದ್ದು ಈ ಹರಾಜಿಗೆ ಬಿಡ್‌ದಾರರು ಬಾರದೇ ಇರುವುದರಿಂದ ಡಿಕ್ರಿ ಬಾಕಿದಾರನ ಸ್ಥಿರ ಸ್ವತ್ತನ್ನು ಸಂಘಕ್ಕೆ ಬರಬೇಕಾದ ಅಸಲು, ಬಡ್ಡಿ ಅಮಲ್ಜಾರಿ ಶುಲ್ಕ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ.70836-57 ದಿನಾಂಕ: 30.11.2004ಕ್ಕೆ ಬಾಕಿ ಇರುವುದಾಗಿ ಚೆಕ್‌ಲಿಸ್ಟ್‌ನಿಂದ ತಿಳಿದು ಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಯನ್ನು ಕಕ್ಷಿದಾರನಾದ ವಾದಿ ಸಂಘಕ್ಕೆ ವರ್ಗಾಯಿಸಲು ವಿವರವಾದ ನೋಟೀಸನ್ನು ಉಲ್ಲೇಖ (2)ರ ರೀತ್ಯಾ ನೀಡಲಾಗಿತ್ತು ಆದರೆ ವರ್ಗಾವಣೆ ಬಗ್ಗೆ ಯಾವುದೇ ವಿಧವಾದ ತಕರಾರು ಅರ್ಜಿ ಸಹ ಬಂದಿರುವುದಿಲ್ಲ ಮತ್ತು ಅಮಲ್ಜಾರಿ ಮೊಬಲಗನ್ನು ಸಹ ಮರುಪಾವತಿ ಮಾಡಿರುವುದಿಲ್ಲ ಈ ಬಗೆಗೆ ಉಲ್ಲೇಖ (3)ರ ರೀತಿ ವರದಿ ಪಡೆಯಲಾಗಿದೆ. ಆದ್ದರಿಂದ ಮಾರಾಟಾಧಿಕಾರಿಗಳು ಬಿಡ್‌ದಾರರು ಯಾರೂ ಬರಲಿಲ್ಲವಾದ ಕಾರಣದಿಂದ ವಾದಿ ಸಂಘದ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶಃ ಸ್ಥಿರ ಸ್ವತ್ತನ್ನು ಡಿಕ್ರಿ ಹೊಂದಿದ ಹಾಲು ಉತ್ಪಾದಕರ ಸಹಕಾರ ಸಂಘ ನಿ. ಹನುಮಂತಪುರ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ ಇವರ ಹೆಸರಿಗೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

**ಆದೇಶ**

**ಸಂಖ್ಯೆ: ಸ.ನಿ.33:ಎಬಿಎನ್:ಇಎಕ್ಸ್‌ಎನ್:ಸೇಲ್ 59:2004-05, ದಿನಾಂಕ: 17ನೇ ಸೆಪ್ಟೆಂಬರ್, 2005**

ಶ್ರೀ ಆರ್. ಲೋಕೇಶ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಂಘಗಳ ಕಾಯ್ದೆ 1959ರ ಕಲಂ 101ಬಿ ರ ಅನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ.ಸಿ.ಎಂ.ಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ:21.11.2001ರ ರೀತ್ಯಾ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಜಿ. ರಂಗಸ್ವಾಮಿ ಬಿನ್ ದಿನ್ನಪ್ಪ, ಛತ್ರಪಾಳ್ಯ, ಹನುಮಂತಪುರ ಅಂಚೆ, ಮಧುಗಿರಿ ತಾಲ್ಲೂಕು ಇವರ ಖುಷ್ಕಿ ಜಮೀನಿನ ವಿಸ್ತೀರ್ಣ 1-13 ಎಕರೆ, ಸರ್ವೆ ನಂ.34, ಚೆಕ್ಕುಬಂದಿ ಪೂರ್ವಕ್ಕೆ ಈರಮಾದಯ್ಯನ ಜಮೀನು, ಪಶ್ಚಿಮಕ್ಕೆ ಬಸಣ್ಣನ ಜಮೀನು, ಉತ್ತರಕ್ಕೆ ಡಿ. ರಂಗಯ್ಯನ ಜಮೀನು ಮತ್ತು ದಕ್ಷಿಣಕ್ಕೆ ಭೋಜರಾಜನ ಜಮೀನು ಈ ಸ್ಥಿರಾಸ್ತಿಯನ್ನು ವಾದಿ ಸಂಘದ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯ್ದೆ ಅನ್ವಯ ನಮೂನೆ 8ನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ: 17.09.2005 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ-38ಎ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾಷೆಯ ಬಗ್ಗೆ**

**ಪ್ರಮಾಣಪತ್ರ**

ತುಮಕೂರು ಜಿಲ್ಲೆ, ಮಧುಗಿರಿ ತಾಲ್ಲೂಕು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹನುಮಂತಪುರ ಇದರ ಕಾರ್ಯದರ್ಶಿ ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಜಿ. ರಂಗಸ್ವಾಮಿ ಬಿನ್ ದಿನ್ನಪ್ಪ ಛತ್ರಪಾಳ್ಯ, ಹನುಮಂತಪುರ ಅಂಚೆ, ಮಧುಗಿರಿ ತಾಲ್ಲೂಕು ಇವರ ಸ್ಥಿರ ಸ್ವತ್ತಿನ ಮಾರಾಟದ ಬಗ್ಗೆ ದಿನಾಂಕ: 02.12.2004ರಂದು ಬಹಿರಂಗ ಹರಾಜು ಇಟ್ಟಿದ್ದು ಹರಾಜಿನಲ್ಲಿ ಕೊಂಡು ಕೊಳ್ಳುವವರು ಯಾರೂ ಬರಲಿಲ್ಲವಾದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ತಾಲ್ಲೂಕು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹನುಮಂತಪುರ, ಮಧುಗಿರಿ ತಾಲ್ಲೂಕು ಈ ಸಂಘದಲ್ಲಿ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹನುಮಂತಪುರ, ಮಧುಗಿರಿ ತಾಲ್ಲೂಕು ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101 ಬಿ ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ**

| ಕ್ರ. ಸಂ. | ಖಾತೆದಾರನ: ಹಕ್ಕುದಾರನ ಹೆಸರು ಮತ್ತು ವಿಳಾಸ | ಸರ್ವೆ ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|
| 1. | ಜಿ. ರಂಗಸ್ವಾಮಿ ಬಿನ್ ದಿನ್ನಪ್ಪ, ಛತ್ರಪಾಳ್ಯ. ಮಿಡಿಗೇಶಿ ಹೋಬಳಿ, ಮಧುಗಿರಿ ತಾಲ್ಲೂಕು. | 34 | 1.13 | ಖುಷ್ಕಿ | ಪೂರ್ವ: ಈರಮಾದಯ್ಯನ ಜಮೀನು.<br>ಪಶ್ಚಿಮ: ಬಸಣ್ಣನ ಜಮೀನು.<br>ಉತ್ತರ: ಡಿ. ರಂಗಯ್ಯನ ಜಮೀನು.<br>ದಕ್ಷಿಣ: ಭೋಜರಾಜನ ಜಮೀನು. |

**ಷರತ್ತು ಮತ್ತು ನಿಯಮಗಳು:**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಸಂಘವೇ ಉಪಯೋಗಿಸತಕ್ಕದ್ದು.

2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.

3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಸಂಘದಲ್ಲಿ ಜಮ ಖರ್ಚು ಮಾಡಿಕೊಳ್ಳತಕ್ಕದ್ದು.

ಸ್ಥಳ: ಮಧುಗಿರಿ
ದಿನಾಂಕ: 17.09.2005

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ-572132.

ಪಿ.ಆರ್.1572

## ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯ
## ಸಂಖ್ಯೆ:ಅಬಕಾರಿ/ ಸಿಆರ್ಎಂ/ ಡಿಟಿಸಿಆರ್/ 62/ 2003-04, ದಿನಾಂಕ:21ನೇ ಸೆಪ್ಟೆಂಬರ್, 2005

**ಉಪಸ್ಥಿತರು :** ಶ್ರೀ ಎಸ್.ಎಸ್. ವಡಕಣ್ಣವರ,
ಅಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ :** ಬಿ.ಎಂ. ಖಾಂಡೇಕರ, ಅಬಕಾರಿ ಉಪ ನಿರೀಕ್ಷಕರು, ಉಪವಲಯ, ಕಾರವಾರ.

**ವಿರುದ್ಧ**

**ಆರೋಪಿ :** ಪರಾರಿಯಾಗಿರುತ್ತಾನೆ.

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 09.08.2003 ರಂದು ವಾಹನ ತಪಾಸಣಾ ಕರ್ತವ್ಯಕ್ಕೆ ಹೋದಾಗ ಸಿಕ್ಕಿರುವ ಬಾತ್ಮಿಯ ಮೇರೆಗೆ ಕಾರವಾರ ತಾಲ್ಲೂಕಿನ ಮಾಜಾಳಿ ಅಬಕಾರಿ ತನಿಖಾ ಠಾಣೆಯಿಂದ 100 ಮೀಟರ್ ದೂರದಲ್ಲಿ ದಕ್ಷಿಣಕ್ಕೆ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ: 17ರಲ್ಲಿ ಗೋವಾ ಗಡಿಭಾಗದ ಬದಿಯಿಂದ ಕಾರವಾರದ ಅಭಿಮುಖವಾಗಿ ಬರುತ್ತಿರುವ ಅಶೋಕ ಲೈಲಂಡ್ ವಾಹನ ಒಂದನ್ನು ಸಂಶಯದ ಮೇರೆಗೆ ನಿಲ್ಲಿಸುವಂತೆ ಸೂಚನೆಯನ್ನು ಕೊಟ್ಟಾಗ, ಸದರಿ ವಾಹನ ನಿಲ್ಲಿಸಿ ವಾಹನದ ಚಾಲಕನು ವಾಹನದಿಂದ ಇಳಿದು ಓಡಿ ಹೋಗಿ ಕತ್ತಲೆಯಲ್ಲಿ ಪರಾರಿಯಾದನೆಂದು, ತಕ್ಷಣ ತಾವು ಸದರಿ ವಾಹನ ನಂ. ಸಿಎಎಂ-4112ನ್ನು ತಪಾಸಣೆ ಮಾಡಿದೆವೆಂದೂ, ಆಗ ವಾಹನದಲ್ಲಿ ಅಕ್ರಮ ಮದ್ಯವನ್ನು ರಹದಾರಿ ಪತ್ರ, ಪರವಾನಿಗೆ ಇಲ್ಲದೇ ಸಾಗಾಟ ಮಾಡುತ್ತಿರುವುದು ಪತ್ತೆಯಾಯಿತೆಂದೂ, ಇವುಗಳನ್ನು ಸಾಗಾಟ ಮಾಡಲು ಯಾವುದೇ ರೀತಿಯ ಪಾಸ್ ಅಥವಾ ಪರ್ಮಿಟ್ ಇಲ್ಲದಿರುವುದು ಕಂಡು ಬಂದಿದ್ದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14 ಪ್ರಕಾರ ಅಪರಾಧವಾಗಿರುವುದಾಗಿ ಮತ್ತು ಕಲಂ 32, 38(ಎ) ಹಾಗೂ 43(ಎ)(2) ರಂತೆ ಶಿಕ್ಷಾರ್ಹವಾಗಿರುವುದಾಗಿ ಮುಂದಿನ ಜಪ್ತಿ ಕ್ರಮವನ್ನು ಜರುಗಿಸಿ ತನ್ನ ಫಿರ್ಯಾದನ್ನು ದಾಖಲಿಸಿ ಕಾರವಾರ ಉಪ ವಲಯದ ಅಬಕಾರಿ ಉಪ ನಿರೀಕ್ಷಕರ ಗುನ್ಹೆ ಸಂಖ್ಯೆ: 1/2003-04 ದಿನಾಂಕ: 09.08.2003 ರಂತೆ ಪ್ರಕರಣ ದಾಖಲಿಸಿ ಸಂಬಂಧಪಟ್ಟ ಪ್ರಥಮ ಮಾಹಿತಿ ವರದಿ ಹಾಗೂ ಪಂಚನಾಮೆಯ ನಕಲು ಸ್ವತ್ತಿನ ಪಟ್ಟಿಯಲ್ಲಿ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಜಪ್ತಿಯಾದ ಸ್ವತ್ತುಗಳ ವಿವರ ಕೆಳಗಿನಂತಿದೆ.

1. ಅಶೋಕ ಲೈಲಂಡ್ ವಾಹನ ನಂ.ಸಿಎಎಂ-4112.
2. ಪ್ರತಿಯೊಂದು ಪೆಟ್ಟಿಗೆಯಲ್ಲಿ 180 ಮಿ.ಲೀ.ನ. 48 ಬಾಟ್ಲಿಗಳಂತಿರುವ ವೆಸ್ಟರ್ನ್ ಬ್ಲೆಂಡ್ ವಿಸ್ಕಿ ಎಂಬ ಮದ್ಯದ ಪೆಟ್ಟಿಗೆಗಳು-500.
3. ಮರದ ಹೊಟ್ಟಿನ ಚೀಲಗಳು-50.
4. ತಡಪಾಲ ಒಂದು.

2. ಈ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಉಪವಲಯ, ಕಾರವಾರ ಇವರ ಪತ್ರ ಸಂಖ್ಯೆ: ಅಬಕಾರಿ/ ಉ.ವ./ ಕಾರ/ ಸಿಆರ್ಎಂ/ 07/ 2003-04, ದಿನಾಂಕ: 29.09.2003 ರಂತೆ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವರದಿಯ ನಕಲನ್ನು ಲಗತ್ತಿಸಿ, ಜಪ್ತಿಯಾದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಿನಂತಿಸಿರುತ್ತಾರೆ. ಲಗ್ತ ಇರುವ ರಾಸಾಯನಿಕ ವಿಶ್ಲೇಷಣಾ ವರದಿ ಸಂಖ್ಯೆ: ಸಿಸಿಎಲ್/4535/ 2003, ದಿನಾಂಕ: 16.09.2003 ರಲ್ಲಿ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು 25.6 ಯು.ಪಿ. ಯಷ್ಟು ಇರುವುದಾಗಿ ಹಾಗೂ ಇವು ಮಾನವನ ಸೇವನೆಗೆ ಯೋಗ್ಯವಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ. ಪ್ರಕರಣ ದಾಖಲಾಗಿ 30 ದಿನಗಳು ಕಳೆದ ನಂತರವೂ ಸಹ ಜಪ್ತಿಯಾದಂತಹ ಮದ್ಯವು ತನ್ನದೆಂದು ಕೋರಿ ಯಾರೂ ಅಧೀಕೃತ ದಾಖಲೆಗಳೊಂದಿಗೆ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸದಿದ್ದ ಕಾರಣ ಆದೇಶ ಸಂಖ್ಯೆ: ಅಬಕಾರಿ/ ಸಿಆರ್ಎಂ/ ಡಿಟಿಸಿಆರ್/62/ 2003-04, ದಿನಾಂಕ: 25.11.2004ರಂತೆ ಸದರಿ ಮದ್ಯವನ್ನು ಹಾಗೂ ಟರ್ಪಾಲು ಮತ್ತು ಮರದ ಹೊಟ್ಟಿನ ಚೀಲಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಲಾಗಿರುತ್ತದೆ.

3. ವಾಹನದ ಮಾಲೀಕರಿಗೆ ಅವಕಾಶವನ್ನು ನೀಡುವ ಉದ್ದೇಶದಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ವಿರುದ್ಧ ಯಾರಾದರೂ ತಕರಾರು ಅಥವಾ ಹೇಳಿಕೆಯನ್ನು ಸಲ್ಲಿಸುವುದಿದ್ದಲ್ಲಿ ಪ್ರಕಟಣೆ ಹೊರಡಿಸಿದ 15 ದಿನಗಳೊಳಗಾಗಿ ಸಲ್ಲಿಸುವಂತೆ ದಿನಾಂಕ: 13.05.2004ರ "ವಿಜಯ ಕರ್ನಾಟಕ" ದಿನಪತ್ರಿಕೆಯಲ್ಲಿ ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಲಾಗಿರುತ್ತದೆ. ಸದರಿ ದಿನಪತ್ರಿಕೆಯು ರಾಜ್ಯಾದ್ಯಂತ ಪ್ರಕಟವಾಗಿರುತ್ತದೆ. ಆದರೆ ಇಂದಿನವರೆಗೆ ಯಾರೂ ಈ ಪ್ರಾಧಿಕಾರದಲ್ಲಿ ಸದರಿ ವಾಹನದ ಬಗ್ಗೆ ತನ್ನ ಹಕ್ಕನ್ನು ಸ್ಥಾಪಿಸಿ, ಅರ್ಜಿ ಸಲ್ಲಿಸಿರುವುದಿಲ್ಲ. ಆನಂತರ ಸದರಿ ವಾಹನದ ಮಾಲೀಕರನ್ನು ಪತ್ತೆ ಹಚ್ಚುವುದಕ್ಕಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಯಶವಂತಪುರ, ಬೆಂಗಳೂರು ರವರಿಗೆ ಪತ್ರ ಬರೆಯಲಾಗಿ ಸದರಿ ವಾಹನವು ತಮ್ಮ ಕಛೇರಿಗೆ ಸೇರ್ಪಡೆಯಾಗಿರುವುದಿಲ್ಲವಾಗಿ ದಿನಾಂಕ: 22.06.2005ರಂದು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

4. ಈ ಪ್ರಕರಣದಲ್ಲಿ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಗಳು ಸಲ್ಲಿಸಿರುವ ದಾಖಲೆಗಳು ಅಭಿಯೋಜನೆಗೆ ಪೂರಕವಾಗಿದ್ದು, ಸದರಿ ದಾಖಲೆಗಳು ಹಾಗೂ ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಭೀತಾಗುತ್ತದೆ.

5. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ನಿರೂಪಿಸುವುದಕ್ಕಾಗಿ ಈ ಪ್ರಾಧಿಕಾರದಲ್ಲಿ ಈವರೆಗೆ ಯಾರೂ ಹಾಜರಾಗಿ ತನ್ನ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಹೀಗಾಗಿ ಈ ಘಟನೆಯ ಬಗ್ಗೆ ಅರಿವಿದ್ದುಕೊಂಡೇ ವಾಹನದ ಮಾಲೀಕರು ಈ ಬಗ್ಗೆ ಯಾವುದೇ ರೀತಿಯ ಅರ್ಜಿಯನ್ನು ಸಲ್ಲಿಸದಿರುವುದು ಸ್ಪಷ್ಟವಾಗುತ್ತದೆ. ಆದ ಕಾರಣ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಡುವುದರಿಂದ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ (1) ರನ್ವಯ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಉಪವಲಯ, ಕಾರವಾರ ಇವರ ಗುನ್ಹೆ ಸಂಖ್ಯೆ: 01.2003-04 ದಿನಾಂಕ: 09.08.2003ರಲ್ಲಿ ಜಪ್ತಿಯಾದಂತಹ ಅಶೋಕ ಲೈಲೆಂಡ್ ಲಾರಿ ಸಂಖ್ಯೆ: ಸಿಎಎಂ-4112 ನೇದನ್ನು (ಮಾದರಿ ಸೀಸೆಗಳನ್ನು ಹೊರತು ಪಡಿಸಿ) ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸವಿಯ ಸೆಪ್ಟೆಂಬರ್ ತಿಂಗಳ 21ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಎಸ್.ಎಸ್. ವಡಕಣ್ಣವರ**

ಪಿ.ಆರ್.1578

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

## ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯ

## ಸಂಖ್ಯೆ:ಅಬಕಾರಿ/ ಸಿಆರ್‌ಎಂ/ ಡಿಟಿಸಿಆರ್/ 118/ 2003-04, ದಿನಾಂಕ:21ನೇ ಸೆಪ್ಟೆಂಬರ್, 2005

**ಉಪಸ್ಥಿತರು :** ಶ್ರೀ ಎಸ್.ಎಸ್. ವಡಕಣ್ಣವರ,
ಅಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ :** ಯು.ಕೆ. ನಾಯ್ಕ,
ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾ ವಿಭಾಗ, ಕಾರವಾರ.

**ವಿರುದ್ಧ**

**ಆರೋಪಿ :** ಪರಾರಿಯಾಗಿರುತ್ತಾನೆ.

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ:10.02.2003 ರಂದು ರಾತ್ರಿ 11.30 ಗಂಟೆಯ ಸಮಯಕ್ಕೆ ಭಟ್ಕಳ ತಾಲ್ಲೂಕಿನ ಶಿರಾಲಿ ಗ್ರಾಮದ ಪೊಲೀಸ್ ತನಿಖಾ ಠಾಣೆ ಹತ್ತಿರ ರಾಷ್ಟ್ರೀಯ ಹೆದ್ದಾರಿ ಮೇಲೆ ಗಸ್ತು ನಡೆಸುತ್ತಿರುವಾಗ ಮಂಗಳೂರು ಕಡೆಯಿಂದ ಬರುತ್ತಿದ್ದ ಲಾರಿ ಸಂಖ್ಯೆ: ಸಿಎನ್‌ಓ-8928 ನ್ನು ತಡೆದು ನಿಲ್ಲಿಸಿ ತಪಾಸಣೆ ಮಾಡಿದಾಗ 1555.200 ಲೀಟರ್ ಭಾರತೀಯ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿರುವುದು ಕಂಡುಬಂದು, ಇವುಗಳನ್ನು ಸಾಗಿಸಲು ಯಾವುದೇ ರೀತಿಯ ಪಾಸ್ ಅಥವಾ ಪರ್ಮಿಟ್ ಇಲ್ಲದಿರುವುದು ಕಂಡು ಬಂದಿದ್ದರಿಂದ ಮುಂದಿನ ಜಪ್ತಿ ಕ್ರಮವನ್ನು ಜರುಗಿಸಿ, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14 ಪ್ರಕಾರ ಅಪರಾಧವಾಗಿರುವುದಾಗಿ ಮತ್ತು ಕಲಂ 32, 38(ಎ) ರಂತೆ ಶಿಕ್ಷಾರ್ಹವಾಗಿರುವುದಾಗಿ ತನ್ನ ಫಿರ್ಯಾದನ್ನು ದಾಖಲಿಸಿ, ಗುಪ್ತ ವಾರ್ತಾ ವಿಭಾಗ, ಕಾರವಾರದ ಅಬಕಾರಿ ನಿರೀಕ್ಷಕರ ಗುನ್ಹೆ ಸಂಖ್ಯೆ: ಇಎಕ್ಸ್‌ಇ/ ಇಐಬಿ/ ಐಇ-2/ ಎಫ್‌ಐಆರ್ ನಂ.35/ 2002-03, ದಿನಾಂಕ: 10.02.2003 ರಂತೆ ಪ್ರಕರಣ ದಾಖಲಿಸಿ ಸಂಬಂಧಪಟ್ಟ ಪ್ರಥಮ ಮಾಹಿತಿ ವರದಿ ಹಾಗೂ ಪಂಚನಾಮೆಯ ನಕಲು ಮತ್ತು ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಜಪ್ತಿಯಾದ ಸ್ವತ್ತುಗಳ ವಿವರ ಕೆಳಗಿನಂತಿದೆ.

1. ಲಾರಿ ಸಂಖ್ಯೆ: ಸಿಎನ್‌ಓ-8928.
2. ಪ್ರತಿಯೊಂದರಲ್ಲಿ ತಲಾ 180 ಮಿ.ಲೀ. ನ 48 ಬಾಟ್ಲಿಗಳಂತಿರುವ ಒರಿಜಿನಲ್ ಚಾಯ್ಸ್ ವಿಸ್ಕಿಯ ಪೆಟ್ಟಿಗೆಗಳು-180.
3. ಹಾಳಾದ ರಟ್ಟಿನ ತುಂಡಿನ ಮೂಟೆಗಳು-60.

2. ಈ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಉಪವಲಯ, ಭಟ್ಕಳ ಇವರ ಪತ್ರ ಸಂಖ್ಯೆ: ಅಬಕಾರಿ/ ಸಿಆರ್‌ಎಂ/ ಮುಟ್ಟುಗೋಲು/ ಎಫ್‌ಐಆರ್ ನಂ.35/2002-03, ದಿನಾಂಕ: 19.03.2003ರಂತೆ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವರದಿಯ ನಕಲನ್ನು ಲಗತ್ತಿಸಿ ಜಪ್ತಿಯಾದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಿನಂತಿಸಿರುತ್ತಾರೆ. ಲಗ್ತ ಇರುವ ರಾಸಾಯನಿಕಾ ವಿಶ್ಲೇಷಣಾ ವರದಿ ಸಂಖ್ಯೆ: ಸಿಸಿಎಲ್/ 1658/ 2003, ದಿನಾಂಕ: 13.03.2003ರಲ್ಲಿ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು ಕ್ರಮವಾಗಿ $28.3^0$ ಯು.ಪಿ. ಯಷ್ಟು ಇರುವುದಾಗಿ ಹಾಗೂ ಇವು ಮಾನವನ ಸೇವನೆಗೆ ಯೋಗ್ಯವಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ. ಪ್ರಕರಣ ದಾಖಲಾಗಿ 30 ದಿನಗಳು ಕಳೆದ ನಂತರವೂ ಸಹ ಜಪ್ತಿಯಾದಂತಹ ಮದ್ಯವು ತನ್ನದೆಂದು ಕೋರಿ ಯಾರೂ ಅಧೀಕೃತ ದಾಖಲೆಗಳೊಂದಿಗೆ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸದಿದ್ದ ಕಾರಣ ಆದೇಶ ಸಂಖ್ಯೆ: ಅಬಕಾರಿ/ ಸಿಆರ್‌ಎಂ/ ಡಿಟಿಸಿಆರ್/ 118/ 2002-03, ದಿನಾಂಕ: 18.03.2003ರಂತೆ ಸದರಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಲಾಗಿರುತ್ತದೆ.

3. ವಾಹನದ ಮಾಲೀಕರಿಗೆ ಅವಕಾಶವನ್ನು ನೀಡುವ ಉದ್ದೇಶದಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ವಿರುದ್ಧ ಯಾರಾದರೂ ತಕರಾರು ಅಥವಾ ಹೇಳಿಕೆಯನ್ನು ಸಲ್ಲಿಸುವುದಿದ್ದಲ್ಲಿ ಪ್ರಕಟಣೆ ಹೊರಡಿಸಿದ 15 ದಿನಗಳೊಳಗಾಗಿ ಸಲ್ಲಿಸುವಂತೆ ದಿನಾಂಕ: 13.05.2004ರ "ವಿಜಯ ಕರ್ನಾಟಕ" ದಿನಪತ್ರಿಕೆಯಲ್ಲಿ ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಲಾಗಿರುತ್ತದೆ. ಸದರಿ ದಿನಪತ್ರಿಕೆಯು ರಾಜ್ಯಾದ್ಯಂತ ಪ್ರಕಟವಾಗಿರುತ್ತದೆ. ಆದರೆ ಇಂದಿನವರೆಗೆ ಯಾರೂ ಈ ಪ್ರಾಧಿಕಾರದಲ್ಲಿ ಸದರಿ ವಾಹನದ ಬಗ್ಗೆ ತನ್ನ ಹಕ್ಕನ್ನು ಸ್ಥಾಪಿಸಿ, ಅರ್ಜಿ ಸಲ್ಲಿಸಿರುವುದಿಲ್ಲ.

4. ಈ ಪ್ರಕರಣದಲ್ಲಿ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಗಳು ಸಲ್ಲಿಸಿರುವ ದಾಖಲೆಗಳು ಅಭಿಯೋಜನೆಗೆ ಪೂರಕವಾಗಿದ್ದು, ಸದರಿ ದಾಖಲೆಗಳು ಹಾಗೂ ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಭೀತಾಗುತ್ತದೆ.

5. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸುವುದಕ್ಕಾಗಿ ಈವರೆಗೆ ಯಾರೂ ಹಾಜರಾಗಿ ತನ್ನ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಹೀಗಾಗಿ ಈ ಘಟನೆಯ ಬಗ್ಗೆ ಅರಿವಿದ್ದುಕೊಂಡೇ ವಾಹನದ ಮಾಲೀಕರು ಈ ಬಗ್ಗೆ ಯಾವುದೇ ರೀತಿಯ ಅರ್ಜಿಯನ್ನು ಸಲ್ಲಿಸದಿರುವುದು ಸ್ಪಷ್ಟವಾಗುತ್ತದೆ. ಹೀಗಾಗಿ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಡುವುದರಿಂದ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ (1) ರನ್ವಯ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ಗುಪ್ತವಾರ್ತಾ ವಿಭಾಗ, ಕಾರವಾರ ಇವರ ಗುನ್ನೆ ಸಂಖ್ಯೆ:ಇಎಕ್ಸ್/ಇಐಬಿ/ ಐ‌ಇ-2/ಎಫ್ಐಆರ್ ನಂ.35/2002-03, ದಿನಾಂಕ:10.02.2003ರಲ್ಲಿ ಜಪ್ತಿಯಾದಂತಹ ಲಾರಿ ಸಂಖ್ಯೆ: ಸಿಎನ್‌ಓ-8928 ನೇದನ್ನು ಹಾಗೂ ಹಾಳಾದ ರಟ್ಟಿನ ತುಂಡಿನ ಮೂಟೆಗಳನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ. ಮುಟ್ಟುಗೋಲು ಹಾಕಿಕೊಂಡ ರಟ್ಟಿನ ತುಂಡುಗಳನ್ನು ನಾಶಪಡಿಸಲು ಅಬಕಾರಿ ನಿರೀಕ್ಷಕರು, ಭಟ್ಕಳ ವಲಯ ಇವರಿಗೆ ಆದೇಶಿಸಿದ್ದೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸವಿಯ ಸೆಪ್ಟೆಂಬರ್ ತಿಂಗಳ 21ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಎಸ್.ಎಸ್. ವಡಕಣ್ಣವರ**

ಪಿ.ಆರ್.1579

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

## ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ

### ಡಿ.ಟಿ.ಸಿ.ಆರ್. ಸಂಖ್ಯೆ:28/2004-05, ದಿನಾಂಕ:22ನೇ ಸೆಪ್ಟೆಂಬರ್, 2005

### ಅಬಕಾರಿ ಉಪ ನಿರೀಕ್ಷಕರು-I, ಚಿಕ್ಕಮಗಳೂರು ಉಪವಿಭಾಗ ಇವರ ಪ್ರವವ ಸಂಖ್ಯೆ: 08/ 2004-05, ದಿನಾಂಕ: 13ನೇ ಸೆಪ್ಟೆಂಬರ್, 2004

**ಉಪಸ್ಥಿತರು :** ಶ್ರೀ ಬಿ.ಜಿ. ವಿಜಯೇಂದ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣದಳ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದಿ :** ಅಬಕಾರಿ ಉಪನಿರೀಕ್ಷಕರು I, ಚಿಕ್ಕಮಗಳೂರು ಉಪವಿಭಾಗ.

**ಆರೋಪಿ :** ಆರೋಪಿ ಯಾರೆಂಬುದು ತಿಳಿದು ಬಂದಿಲ್ಲ.

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 13.09.2004ರಂದು ಸಾಯಂಕಾಲ 4.30 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು ನಂ.1, ಚಿಕ್ಕಮಗಳೂರು ಉಪವಿಭಾಗ ಇವರು ಮತ್ತು ಸಿಬ್ಬಂದಿಯವರು ಬಂದ ಖಚಿತ ವರ್ತಮಾನದ ಮೇರೆಗೆ ಪಂಚರ ಸಮಕ್ಷಮದೊಂದಿಗೆ ಚಿಕ್ಕಮಗಳೂರು ತಾಲ್ಲೂಕು ಕುಂದೂರು ಸಾರ್‌ಗೋಡ್‌ನಿಂದ ಚಿಕ್ಕಮಗಳೂರಿಗೆ ಬರುವ ರಸ್ತೆ ಪಕ್ಕದಲ್ಲಿ ಸಾರ್‌ಗೋಡ್‌ನಿಂದ 1 ಕಿ.ಮೀ. ದೂರದಲ್ಲಿ ಗಸ್ತು ಕಾರ್ಯ ಮಾಡುತ್ತಿದ್ದ ಸಮಯದಲ್ಲಿ ಸ್ವಲ್ಪ ದೂರದಲ್ಲಿ ಒಂದು ದ್ವಿಚಕ್ರ ವಾಹನ ಸಿ.ಕೆ.ಡಿ. 4737 (ಯಜ್ಡಿ ಬೈಕ್) ಅನ್ನು ಬರುತ್ತಿರುವುದು ಕಂಡು ಬಂದ ಮೇರೆಗೆ ಸಿಬ್ಬಂದಿಯವರುಗಳು ಅನುಮಾನಗೊಂಡು ತಡೆದು ನಿಲ್ಲಿಸಿದಾಗ ಬೈಕ್‌ನಲ್ಲಿದ್ದ ಆಸಾಮಿಯು ಗಾಬರಿಯಿಂದ ಬೈಕ್‌ನ್ನು ಅಲ್ಲಿಯೇ ಬಿಟ್ಟು ತಪ್ಪಿಸಿಕೊಂಡು ಓಡಿ ಹೋದನು. ನಂತರ ಬೈಕ್‌ನ ಹತ್ತಿರ ಹೋಗಿ ಪರಿಶೀಲಿಸಲಾಗಿ ಸದರಿ ಬೈಕ್‌ನಲ್ಲಿ ಬಿಗಿಯಾಗಿ ದಾರದಿಂದ ಕಟ್ಟಿದ ಒಂದು ಪ್ಲಾಸ್ಟಿಕ್ ಕ್ಯಾನಿನಲ್ಲಿ 20 ಲೀಟರ್ ಸಾರಾಯಿ ಇರುವುದು ಕಂಡು ಬಂದಿತು. ಸಾಗಾಣಿಕೆಗೆ ಸಂಬಂಧಿಸಿದಂತೆ ಅಧಿಕೃತ ರಹದಾರಿ ಪತ್ರಗಳಾಗಲಿ ಅಥವಾ ಇತರೆ ಯಾವುದೇ ದಾಖಲಾತಿಗಳಾಗಲೀ ಲಭ್ಯವಾಗಿರುವುದಿಲ್ಲ. ಆದ್ದರಿಂದ ಇದು ಕಳ್ಳಭಟ್ಟಿ ಸಾರಾಯಿಯೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಕಳ್ಳಭಟ್ಟಿ ಸಾರಾಯಿಯನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತು ಪಡಿಸಿಕೊಂಡು ಪ್ರ.ವ. ವ ಸಂಖ್ಯೆ: 08/2004-05, ದಿನಾಂಕ: 13.09.2004ರಂದು ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಕಳ್ಳಭಟ್ಟಿ ಸಾರಾಯಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲು ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ರಾಜಾಜಿನಗರ (ಪಶ್ಚಿಮ) ಬೆಂಗಳೂರು ಜಿಲ್ಲೆ, ಇವರಿಂದ ಪಡೆಯಲಾದ ವಾಹನದ "ಬಿ" ಎಕ್ಸ್ಟ್ರಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಎಂ. ಹರೀಶ್ ರಾವ್ ಬಿನ್ ರಾಮ ನಂದರಾವ್, ಎಂ. ಕಮರ್ಷಿಯಲ್ ಡೈರೆಕ್ಟರ್ ಪೀಸಿಸ್ ಇಂಡಸ್ಟ್ರೀಸ್ ಪ್ರೈವೈಟ್ ಲಿಮಿಟೆಡ್ ನಂ.22, 3ಫೇಸ್, 5ಮೇನ್, ಪೀಣ್ಯ, ಬೆಂಗಳೂರು-58. ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ, ಚಿಕ್ಕಮಗಳೂರು, ಇವರು ವಾಹನಕ್ಕೆ ರೂ.1,500/- (ಒಂದು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಗಳ ಬೆಲೆಯನ್ನು ನಿಗದಿಪಡಿಸಿ ನೀಡಿರುವ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರು ಸಲ್ಲಿಸಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ಎಂ. ಹರೀಶ್‌ರಾವ್ ಬಿನ್ ರಾಮನಂದರಾವ್ ಎಂ. ಕಮರ್ಷಿಯಲ್ ಡೈರೆಕ್ಟರ್ ಪೀಸಿಸ್ ಇಂಡಸ್ಟ್ರೀಸ್ ಪ್ರೈವೇಟ್ ಲಿಮಿಟೆಡ್, ನಂ.22, 3ಫೇಸ್, 5 ಮೇನ್, ಪೀಣ್ಯ, ಬೆಂಗಳೂರು-58, ಇವರಿಗೆ ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೊಂಡಿದ್ದು, ದಿನಾಂಕ: 31.05.2005ರಂದು ಜಾರಿಯಾಗಿದ್ದು, ಸ್ವೀಕೃತಿಯ ಪತ್ರವು ಈ ಪ್ರಾಧಿಕಾರಕ್ಕೆ ದಿನಾಂಕ: 08.06.2005 ಬಂದಿರುತ್ತದೆ.

ಮೇಲ್ಕಾಣಿಸಿದ ವಾಹನದ ಮಾಲೀಕರು ದಿನಾಂಕ: 10.06.2005 ರಂದು ಅಂಚೆ ಮೂಲಕ 43(ಬಿ) ಅಡಿಯಲ್ಲಿ ನೀಡಿರುವ ನೋಟೀಸ್‌ಗೆ ಉತ್ತರವಾಗಿ ಸಿ.ಕೆ.ಡಿ. 4737 (ಯಜ್ಡಿ ಬೈಕ್) ವಾಹನವನ್ನು ಶ್ರೀ ವಿಜಿ, ನಂ.80, 10ನೇ ಕ್ರಾಸ್, ಎಂ.ಇ.ಐ.ಲೇಔಟ್, ರಾಜ್‌ಗೋಪಾಲ್ ನಗರ, ಬೆಂಗಳೂರು-560058 ಇವರಿಗೆ ದಿನಾಂಕ: 05.08.1995 ರಂದು ವಾಹನವನ್ನು ಮಾರಾಟ ಮಾಡಿರುವುದಾಗಿ ಡೆಲಿವರಿ ನೋಟ್‌ನ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ ಸಲ್ಲಿಸಿರುತ್ತಾರೆ.

ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ದಾಖಲಾತಿಗಳು ಮೊಕದ್ದಮೆ ದಾಖಲಾಗಿ ಒಂದು ವರ್ಷ ಒಂಭತ್ತು ದಿನಗಳಾಗಿದ್ದು ಶ್ರೀ ವಿಜಿ, ನಂ.80, 10ನೇ ಕ್ರಾಸ್, ಎಂ.ಇ.ಐ.ಲೇಔಟ್, ರಾಜ್‌ಗೋಪಾಲ್‌ನಗರ, ಬೆಂಗಳೂರು-560058 ಇವರು ಕೂಡ ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಸಹ ಪ್ರಾಧಿಕಾರದ ಮುಂದೆ ಬಂದು ಹಕ್ಕು ಸಾಧಿಸಿರುವುದಿಲ್ಲ. ಅಲ್ಲದೇ ವಾಹನದ ಮೂಲ ಮಾಲೀಕರು ವಾಹನವನ್ನು ಮಾರಾಟ ಮಾಡಿರುವ ಪ್ರತಿಕ್ರಿಯೆ ನೀಡಿರುವ ಹಿನ್ನಲೆಯಲ್ಲಿ ಸದರಿಯವರುಗಳಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ.43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**"ಆದೇಶ"**

ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ: 212:ಇಪಿಎಸ್: 2004, ಬೆಂಗಳೂರು, ದಿನಾಂಕ: 05.05.2005ರ ಆದೇಶದಂತೆ ಶ್ರೀ ಬಿ.ಜಿ. ವಿಜಯೇಂದ್ರ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣದಳ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ. 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಸಿಕೆಡಿ. 4737 (ಯಜ್ಡಿ ಬೈಕ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಅಬಕಾರಿ ಉಪ ನಿರೀಕ್ಷಕರು, (ಜಾರಿ ಮತ್ತು ತನಿಖೆ) ಚಿಕ್ಕಮಗಳೂರು ತಾಲ್ಲೂಕು, ಇವರು ನ್ಯಾಯಾಲಯಕ್ಕೆ ಅಂತಿಮ ವರದಿ ಸಲ್ಲಿಸಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ಇಂದು ಅಂದರೆ 22ನೇ ಸೆಪ್ಟೆಂಬರ್ 2005ರಂದು ಬೆರಳಚ್ಚುಗಾರರಿಗೆ ಉಖ್ತ್ರಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಪ್ರಾಧಿಕೃತ ಅಧಿಕಾರಿ ಹಾಗೂ
ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣದಳ,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.1580

## ಜಿಲ್ಲಾಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು

## ಅಧಿಸೂಚನೆ

### ಸಂಖ್ಯೆ: ಡಿಬಿಸಿಎಂ:ನ:ಸಿಬ್ಬಂದಿ:ಸಿಆರ್45:05-06, ಬೆಂಗಳೂರು, ದಿನಾಂಕ:29ನೇ ಸೆಪ್ಟೆಂಬರ್, 2005

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2002 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ-56: ಯೋಮಸ-02(1) ದಿನಾಂಕ: 18.07.2002.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕುಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮ 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಜಿಲ್ಲಾ ಮಟ್ಟದ ಹಂತದಲ್ಲಿ ಹಿಂದುಳಿದ ವರ್ಗಗಳ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ಜಿಲ್ಲಾ ಮಟ್ಟದಲ್ಲಿ | ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ. | ಮುಖ್ಯಕಾರ್ಯನಿರ್ವಹಣಾಧಿಕಾರಿಗಳು ಜಿಲ್ಲಾ ಪಂಚಾಯತ್. |
| ತಾಲ್ಲೂಕು ಮಟ್ಟದಲ್ಲಿ | ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳು | ಕಾರ್ಯನಿರ್ವಾಹಕ ಅಧಿಕಾರಿಗಳು ತಾಲ್ಲೂಕು ಪಂಚಾಯತ್. |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ಕಾಣಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಜಿಲ್ಲಾ ಹಂತದಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ಕಛೇರಿಯ ಜಿಲ್ಲಾಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಲ್ಲಿ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆರವರು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1) ಕಛೇರಿ ಮೇಲ್ವಿಚಾರಕರು - 1 ಹುದ್ದೆ.
2) ಪ್ರ.ದ.ಸ. - 2 ಹುದ್ದೆಗಳು.
3) ದ್ವಿ.ದ.ಸ. - 3 ಹುದ್ದೆಗಳು.
4) ಬೆರಳಚ್ಚುಗಾರರು - 1 ಹುದ್ದೆ.
5) ವಾಹನ ಚಾಲಕರು - 1 ಹುದ್ದೆ.
6) 'ಡಿ' ಗ್ರೂಪ್ ನೌಕರರು - 1 ಹುದ್ದೆ.

**ಅಧಿಕಾರಿಗಳು ಮತ್ತು ನೌಕರರ ಅಧಿಕಾರಿಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಜಿಲ್ಲಾಮಟ್ಟದಲ್ಲಿ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಜಿಲ್ಲಾವಲಯದಲ್ಲಿ ಸಂಬಂಧಿಸಿದ ಜಿಲ್ಲಾಪಂಚಾಯತ್ ಮುಖ್ಯಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**1) ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖಾ ಅಧಿಕಾರಿಗಳು:**

ಜಿಲ್ಲಾ ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಇಲಾಖಾ ಅಧಿಕಾರಿಗಳು ವಿವರಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಅಂಶವಾರು ಮಾಹಿತಿ.

ಹಿಂದುಳಿದ ವರ್ಗಗಳ ಇಲಾಖೆಯ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ಕಾರ್ಯಕ್ರಮಗಳ ಮೇಲ್ವಿಚಾರಣೆ 'ಡಿ' ಗ್ರೂಪ್ ನೌಕರರ ನೇಮಕಾತಿ ಪ್ರಾಧಿಕಾರ, ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿ ಬಗ್ಗೆ ತಪಾಸಣೆ, ಘಟಕ ಕಛೇರಿಗೆ ತಪಾಸಣೆ, ವಸತಿನಿಲಯಗಳ ತಪಾಸಣೆ, ಇಲಾಖೆಯ ಇತರೆ ಸಂಸ್ಥೆಗಳ ತಪಾಸಣೆ, ಇತ್ಯಾದಿ ಕಾರ್ಯಕ್ರಮಗಳ ಮೇಲ್ವಿಚಾರಣೆ ಮತ್ತು ಸಕ್ಷಮ ಪ್ರಾಧಿಕಾರಿಯಾಗಿ ರಾಜ್ಯವಲಯ ಕಾರ್ಯಕ್ರಮಗಳ ಸಂಬಂಧಪಟ್ಟಂತೆ ಜಿಲ್ಲಾಧಿಕಾರಿಗಳ ಅಧೀನದಲ್ಲಿ ಮತ್ತು ಜಿಲ್ಲಾವಲಯ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ಜಿಲ್ಲಾಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅಧೀನದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ಸಕ್ಷಮ ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಾರೆ.

**2) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯ ನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತೆ ಎಲ್ಲಾ ಕಾಗದ ಪತ್ರಗಳನ್ನು, ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಮೇಲ್ವಿಚಾರಕರ ಕಿರುಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೊಂದಾಯಿಸಿ ಸಂಬಂಧಪಟ್ಟ ವಿಷಯನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**3) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಂತೆ ರೂಪಿಸಿರುವ ಗುಣ ಮಟ್ಟಗಳು:**

1) ಕಛೇರಿಯಲ್ಲಿ ಸ್ವೀಕರಿಸಲಾಗಿರುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತೆ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಮೇಲ್ವಿಚಾರಕರಿಂದ ವಿಷಯ ನಿರ್ವಾಹಕರ ಮೇಜುತಪಾಸಣೆ ಕಾರ್ಯ ಕೈಗೊಳ್ಳುವರು.
4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5) ಸರ್ಕಾರವು ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**4) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರ:**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು ಆದೇಶಗಳು ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2) ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸುವುದು.
3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000, ಮುಖ್ಯಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರು ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಯಾಗಿ ಹಾಗೂ ಕಾರ್ಯನಿರ್ವಾಹಕ ಅಧಿಕಾರಿಗಳು ತಾಲ್ಲೂಕು ಪಂಚಾಯತ್‌ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

**ಈ ಕಛೇರಿಯ ಅಧೀನದಡಿಯಲ್ಲಿರುವ ಸಂಸ್ಥೆಗಳ ವಿವರ ಕೆಳಕಂಡಂತಿದೆ:**

1) ವಿದ್ಯಾರ್ಥಿನಿಲಯಗಳು (ಮೆಟ್ರಿಕ್ ಪೂರ್ವ: ಮೆಟ್ರಿಕ್ ನಂತರ)
2) ಆಶ್ರಮ ಶಾಲೆಗಳು.
3) ಹೊಲಿಗೆ ತರಬೇತಿ ಕೇಂದ್ರಗಳು.
4) ನವೋದಯ ಮಾದರಿ ವಸತಿ ಶಾಲೆ.

**ಇಲಾಖೆವತಿಯಿಂದ ದೊರೆಯುವ ಸೌಲಭ್ಯಗಳು:**

1) ಹೊಲಿಗೆ ತರಬೇತಿ ಕೇಂದ್ರಗಳು.
2) ಕಾನೂನು ಪದವೀಧರರಿಗೆ ಧನಸಹಾಯ.
3) ಮೆಟ್ರಿಕ್ ಪೂರ್ವ: ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯಗಳು.
4) ಖಾಸಗಿ ಅನುದಾನಿತ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಿಗೆ ಸಹಾಯಧನ.
5) ಖಾಸಗಿ ಅನುದಾನಿತ ಅನಾಥಾಲಯಗಳಿಗೆ ಸಹಾಯಧನ.
6) ಮೆಟ್ರಿಕ್‌ಪೂರ್ವ: ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ.
7) ವರ್ಗ-1ರ ವಿದ್ಯಾರ್ಥಿಗಳಿಗೆ ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ.
8) ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಾತಿ ಪರಿಶೀಲಿಸಿ ಅರ್ಹರಾದವರಿಗೆ ಸಿಂಧುತ್ವ ಪ್ರಮಾಣ ಪತ್ರ.
9) ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ.
10) ವರ್ಗ-1 ಹಾಗೂ ಇತರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ.
11) ವೃತ್ತಿಪರ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಇತರೆ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ.
12) ಆಶ್ರಮ ಶಾಲೆಗಳು: ವಸತಿ ಶಾಲೆಗಳು.
13) ಶ್ರಮಶಕ್ತಿ ಯೋಜನೆಯಡಿಯಲ್ಲಿ ಸಾಂಪ್ರಾದಾಯಿಕ ಕುಶಲಕರ್ಮಿಗಳಿಗೆ ಸಾಲ.

ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್.1581

## ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ನಿರ್ದೇಶನಾಲಯ
## ವಿಶ್ವೇಶ್ವರಯ್ಯ ಕೇಂದ್ರ, ಒಂದನೇ ಅಂತಸ್ತು, ಡಾ: ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು
## ಅಧಿಸೂಚನೆ
### ಸಂಖ್ಯೆ: ಸ.ಉ.ಸಿ.(5) 29: 2002-03, ಬೆಂಗಳೂರು, ದಿನಾಂಕ:14ನೇ ಅಕ್ಟೋಬರ್, 2005

ಕರ್ನಾಟಕ ರಾಜ್ಯ ಸರ್ಕಾರವು ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಆಇ 184 ಸಮಯ 2005 ದಿನಾಂಕ: 22.09.2005ರಲ್ಲಿ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯನ್ನು ಸಾರ್ವಜನಿಕ ಪ್ರಾಧಿಕಾರ ಎಂದು ಗುರುತಿಸಿರುವುದರಿಂದ ಹಾಗೂ 2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ಸಂಖ್ಯೆ: 22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಗೆ ಸಂಬಂಧಿಸಿದಂತೆ, ಇಲಾಖೆಯ ಉಪ ನಿರ್ದೇಶಕರು (ಆಡಳಿತ) ಇವರನ್ನು ಸಂಬಂಧಪಟ್ಟ ವಿಷಯಗಳ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತೆಯೇ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು "ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ" ನೇಮಕ ಮಾಡಲಾಗಿದೆ.

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5ರ ಉಪಕಲಂ 2ರನ್ವಯ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಜಿಲ್ಲಾ ಮುಖ್ಯಸ್ಥರಾದ ಎಲ್ಲಾ ಸಹಾಯಕ ನಿರ್ದೇಶಕರನ್ನು ಇಲಾಖೆಗೆ ಸಂಬಂಧಪಡುವ ವಿಷಯಗಳಿಗೆ ಮಾಹಿತಿ ಕೋರುವ ಅರ್ಜಿಗಳನ್ನು ಸ್ವೀಕರಿಸಲು " ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ" ನೇಮಕ ಮಾಡಲಾಗಿದೆ.

ಮಾಹಿತಿ ಹಕ್ಕು ಅಧಿನಿಯಮದ 2005ರ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಲು ನಿರ್ದೇಶಕರು ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ, ಬೆಂಗಳೂರು ಇವರನ್ನು "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

ನಿರ್ದೇಶಕರು,
ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಬೆಂಗಳೂರು.

ಪಿ.ಆರ್.1582

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ
## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, 6ನೇ ಮಹಡಿ, ಕಾವೇರಿ ಭವನ,
## ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಕೆ.ಜಿ. ರಸ್ತೆ, ಬೆಂಗಳೂರು-560 009
## ಅಧಿಸೂಚನೆ
### ಸಂಖ್ಯೆ:ಡಿಪಿಎನ್: ಕೇಂಸ: ವಿವ:17:2005-06, ಬೆಂಗಳೂರು, ದಿನಾಂಕ:10ನೇ ಅಕ್ಟೋಬರ್, 2005

ಕೇಂದ್ರ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಕಾಯಿದೆ 2005ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಸಂಬಂಧಿಸಿದಂತೆ, ಸೆಕ್ಷನ್ 2 (ಹೆಚ್)ರ ಅಡಿಯಲ್ಲಿ ಈ ಕೆಳಗೆ ಕಾಣಿಸಿದಂತೆ ಸಾರ್ವಜನಿಕ ಪ್ರಾಧಿಕಾರಗಳನ್ನು ಗುರುತಿಸಲಾಗಿದೆ.

1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು.
2. ಅಭಿಯೋಗ ಉಪನಿರ್ದೇಶಕರ ಕಛೇರಿಗಳು:

ಬೆಂಗಳೂರು ನಗರ ವಿಭಾಗ, ಬೆಂಗಳೂರು ವಿಭಾಗ, ಮೈಸೂರು ವಿಭಾಗ, ದಾವಣಗೆರೆ ವಿಭಾಗ, ಮಂಗಳೂರು ವಿಭಾಗ, ಬೆಳಗಾವಿ ವಿಭಾಗ, ಗುಲ್ಬರ್ಗಾ ವಿಭಾಗ.

3. ಪ್ರಧಾನ ಸರ್ಕಾರಿ ಅಭಿಯೋಜಕರುಗಳ ಕಛೇರಿಗಳು:

ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ತುಮಕೂರು ಜಿಲ್ಲೆ, ಕೋಲಾರ ಜಿಲ್ಲೆ, ಮೈಸೂರು ಜಿಲ್ಲೆ, ಚಾಮರಾಜನಗರ ಜಿಲ್ಲೆ, ಮಂಡ್ಯ ಜಿಲ್ಲೆ, ಹಾಸನ ಜಿಲ್ಲೆ, ಕೊಡಗು ಜಿಲ್ಲೆ, ದಾವಣಗೆರೆ ಜಿಲ್ಲೆ, ಚಿತ್ರದುರ್ಗ ಜಿಲ್ಲೆ, ಶಿವಮೊಗ್ಗ ಜಿಲ್ಲೆ, ಬಳ್ಳಾರಿ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ, ಉಡುಪಿ ಜಿಲ್ಲೆ, ಚಿಕ್ಕಮಗಳೂರು ಜಿಲ್ಲೆ, ಬೆಳಗಾಂ ಜಿಲ್ಲೆ, ಧಾರವಾಡ ಜಿಲ್ಲೆ, ಗದಗ ಜಿಲ್ಲೆ, ಹಾವೇರಿ ಜಿಲ್ಲೆ, ಬಿಜಾಪುರ ಜಿಲ್ಲೆ, ಬಾಗಲಕೋಟೆ ಜಿಲ್ಲೆ, ಗುಲ್ಬರ್ಗಾ ಜಿಲ್ಲೆ, ರಾಯಚೂರು ಜಿಲ್ಲೆ, ಕೊಪ್ಪಳ ಜಿಲ್ಲೆ, ಬೀದರ್ ಜಿಲ್ಲೆ.

ಮೇಲ್ಕಾಣಿಸಿದ ಸಾರ್ವಜನಿಕ ಪ್ರಾಧಿಕಾರಿಗಳಿಗೆ ಮಾಹಿತಿ ಪಡೆಯಲು ಹಕ್ಕು ಕಾಯಿದೆ 2005ರ ಸೆಕ್ಷನ್ 5(1) ಮತ್ತು 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಗಳನ್ನು ಹಾಗೂ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಕ ಮಾಡಲಾಗಿದೆ.

| ಕ್ರ.ಸಂ. | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿ |
|---|---|---|---|
| 1 | 2 | 3 | 4 |
| 1. | ಜಂಟಿ ಅಭಿಯೋಗ ನಿರ್ದೇಶಕರು. | ನಿರ್ದೇಶಕರ ಕೇಂದ್ರ ಸಹಾಯಕರು | ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು. |
| 2. | **ಅಭಿಯೋಗ ಉಪನಿರ್ದೇಶಕರ ಕಛೇರಿಗಳು** | | |
| | ಅಭಿಯೋಗ ಉಪನಿರ್ದೇಶಕರು. | ಆಡಳಿತಾಧಿಕಾರಿ ಅಭಿಯೋಗ ಉಪನಿರ್ದೇಶಕರ ಕಛೇರಿ. | ಜಂಟಿ ಅಭಿಯೋಗ ನಿರ್ದೇಶಕರು (ಆಡಳಿತ) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು. |
| (1) | ಬೆಂಗಳೂರು ನಗರ ವಿಭಾಗ. | -"- | |
| (2) | ಬೆಂಗಳೂರು ವಿಭಾಗ, ಬೆಂಗಳೂರು. | -"- | |
| (3) | ಮೈಸೂರು ವಿಭಾಗ, ಮೈಸೂರು. | -"- | |
| (4) | ದಾವಣಗೆರೆ ವಿಭಾಗ, ದಾವಣಗೆರೆ. | -"- | |
| (5) | ಮಂಗಳೂರು ವಿಭಾಗ, ಮಂಗಳೂರು. | -"- | |
| (6) | ಬೆಳಗಾಂ ವಿಭಾಗ, ಬೆಳಗಾಂ. | -"- | |
| (7) | ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ. | -"- | |
| 3. | **ಸರ್ಕಾರಿ ಅಭಿಯೋಜಕರ ಕಛೇರಿಗಳು ಮತ್ತು ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗಳು.** | | |
| (1) | ಪ್ರಧಾನ ಕಛೇರಿ ಅಭಿಯೋಜಕರು, ಬೆಂಗಳೂರು ನಗರ. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರುಗಳು, ಬೆಂಗಳೂರು ನಗರ | ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ನಗರ. |
| (2) | ಪ್ರಧಾನ ಸರ್ಕಾರಿ ಅಭಿಯೋಜಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು. | ಸಹಾಯಕ ಸರ್ಕಾರಿ ಅಭಿಯೋಜಕರು, ದೊಡ್ಡಬಳ್ಳಾಪುರ, ಆನೇಕಲ್, ದೇವನಹಳ್ಳಿ, ಮಾಗಡಿ, ನೆಲಮಂಗಲ, ಕನಕಪುರ, ಚನ್ನಪಟ್ಟಣ, ಹೊಸಕೋಟೆ, ರಾಮನಗರ. | ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು. |
| (3) | ಪ್ರಧಾನ ಸರ್ಕಾರಿ ಅಭಿಯೋಜಕರು, ತುಮಕೂರು ಜಿಲ್ಲೆ, ತುಮಕೂರು. | ಸಹಾಯಕ ಸರ್ಕಾರಿ ಅಭಿಯೋಜಕರು, ತುಮಕೂರು, ತಿಪಟೂರು, ಶಿರಾ, ಗುಬ್ಬಿ, ಕುಣಿಗಲ್, ಚಿಕ್ಕನಾಯಕನಹಳ್ಳಿ, ಮಧುಗಿರಿ, ಪಾವಗಡ, ತುರುವೇಕೆರೆ, ಕೊರಟಗೆರೆ. | ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು. |
| (4) | ಪ್ರಧಾನ ಸರ್ಕಾರಿ ಅಭಿಯೋಜಕರು, ಕೋಲಾರ ಜಿಲ್ಲೆ, ಕೋಲಾರ. | ಸಹಾಯಕ ಸರ್ಕಾರಿ ಅಭಿಯೋಜಕರು: ಕೋಲಾರ, ಕೆ.ಜಿ.ಎಫ್., ಚಿಂತಾಮಣಿ, ಚಿಕ್ಕಬಳ್ಳಾಪುರ, ಗೌರಿಬಿದನೂರು, ಶಿಡ್ಲಘಟ್ಟ, ಮಾಲೂರು, ಬಾಗೇಪಲ್ಲಿ, ಮುಳಬಾಗಿಲು, ಶ್ರೀನಿವಾಸಪುರ, ಗುಡಿಬಂಡೆ. | ಅಭಿಯೋಗ ಉಪನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು. |
| (5) | ಪ್ರಧಾನ ಸರ್ಕಾರಿ ಅಭಿಯೋಜಕರು, ಮೈಸೂರು ಜಿಲ್ಲೆ, ಮೈಸೂರು. | ಸಹಾಯಕ ಸರ್ಕಾರಿ, ಅಭಿಯೋಜಕರು: ಮೈಸೂರು, ಕೆ.ಆರ್.ನಗರ, ಹುಣಸೂರು, ನಂಜನಗೂಡು, ಟಿ.ನರಸೀಪುರ, ಪಿರಿಯಾಪಟ್ಟಣ, ಹೆಗ್ಗಡದೇವನಕೋಟೆ. | ಅಭಿಯೋಗ ಉಪನಿರ್ದೇಶಕರು, ಮೈಸೂರು ವಿಭಾಗ, ಮೈಸೂರು. |
| (6) | ಸರ್ಕಾರಿ ಅಭಿಯೋಜಕರು, ಚಾಮರಾಜನಗರ ಜಿಲ್ಲೆ (ಎಫ್.ಟಿ.ಸಿ.) ಚಾಮರಾಜನಗರ. | ಸಹಾಯಕ ಸರ್ಕಾರಿ ಅಭಿಯೋಜಕರು: ಚಾಮರಾಜನಗರ, ಕೊಳ್ಳೇಗಾಲ, ಗುಂಡ್ಲುಪೇಟೆ, ಯಳಂದೂರು. | ಅಭಿಯೋಗ ಉಪನಿರ್ದೇಶಕರು, ಮೈಸೂರು ವಿಭಾಗ, ಮೈಸೂರು. |
| (7) | ಪ್ರಧಾನ ಸರ್ಕಾರಿ ಅಭಿಯೋಜಕರು, ಮಂಡ್ಯ ಜಿಲ್ಲೆ, ಮಂಡ್ಯ. | ಸಹಾಯಕ ಸರ್ಕಾರಿ ಅಭಿಯೋಜಕರು: ಮಂಡ್ಯ, ಶ್ರೀರಂಗಪಟ್ಟಣ, ಮಳವಳ್ಳಿ, ಮದ್ದೂರು, ಕೆ.ಆರ್.ಪೇಟೆ, ನಾಗಮಂಗಲ, ಪಾಂಡವಪುರ. | ಅಭಿಯೋಗ ಉಪನಿರ್ದೇಶಕರು, ಮೈಸೂರು ವಿಭಾಗ, ಮೈಸೂರು. |
| (8) | ಪ್ರಧಾನ ಸರ್ಕಾರಿ ಅಭಿಯೋಜಕರು, ಹಾಸನ ಜಿಲ್ಲೆ, ಹಾಸನ. | ಸಹಾಯಕ ಸರ್ಕಾರಿ ಅಭಿಯೋಜಕರು: ಹಾಸನ, ಹೊಳೇನರಸೀಪುರ, ಚನ್ನರಾಯಪಟ್ಟಣ, ಅರಸೀಕೆರೆ, ಸಕಲೇಶಪುರ, ಅರಕಲಗೂಡು, ಬೇಲೂರು, ಆಲೂರು. | ಅಭಿಯೋಗ ಉಪನಿರ್ದೇಶಕರು, ಮೈಸೂರು ವಿಭಾಗ, ಮೈಸೂರು. |

| 1 | 2 | 3 | 4 |
|---|---|---|---|
| (9) | ಪ್ರಧಾನ ಸರ್ಕಾರಿ ಅಭಿಯೋಜಕರು, ಕೊಡುಗು ಜಿಲ್ಲೆ, ಮಡಿಕೇರಿ. | ಸಹಾಯಕ ಸರ್ಕಾರಿ ಅಭಿಯೋಜಕರು: ಮಡಿಕೇರಿ, ವಿರಾಜಪೇಟೆ, ಸೋಮವಾರಪೇಟೆ. | ಅಭಿಯೋಗ ಉಪನಿರ್ದೇಶಕರು, ಮೈಸೂರು ವಿಭಾಗ, ಮೈಸೂರು. |
| (10) | ಪ್ರಧಾನ ಸರ್ಕಾರಿ ಅಭಿಯೋಜಕರು, ದಾವಣಗೆರೆ ಜಿಲ್ಲೆ, ದಾವಣಗೆರೆ. | ಸಹಾಯಕ ಸರ್ಕಾರಿ ಅಭಿಯೋಜಕರು, ದಾವಣಗೆರೆ, ಹರಿಹರ, ಜಗಳೂರು, ಹರಪನಹಳ್ಳಿ, ಚನ್ನಗಿರಿ, ಹೊನ್ನಾಳಿ. | ಅಭಿಯೋಗ ಉಪನಿರ್ದೇಶಕರು, ದಾವಣಗೆರೆ ವಿಭಾಗ, ದಾವಣಗೆರೆ. |
| (11) | ಪ್ರಧಾನ ಸರ್ಕಾರಿ, ಅಭಿಯೋಜಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ. | ಸಹಾಯಕ ಸರ್ಕಾರಿ ಅಭಿಯೋಜಕರು: ಚಿತ್ರದುರ್ಗ, ಹೊಸದುರ್ಗ, ಮೊಳಕಾಲ್ಮೂರು, ಹಿರಿಯೂರು, ಹೊಳಲ್ಕೆರೆ, ಚಳ್ಳಕೆರೆ. | ಅಭಿಯೋಗ ಉಪನಿರ್ದೇಶಕರು, ದಾವಣಗೆರೆ ವಿಭಾಗ, ದಾವಣಗೆರೆ. |
| (12) | ಪ್ರಧಾನ ಸರ್ಕಾರಿ ಅಭಿಯೋಜಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ. | ಸಹಾಯಕ ಸರ್ಕಾರಿ ಅಭಿಯೋಜಕರು: ಶಿವಮೊಗ್ಗ, ಭದ್ರಾವತಿ, ಸಾಗರ, ತೀರ್ಥಹಳ್ಳಿ, ಹೊಸನಗರ, ಶಿಕಾರಿಪುರ, ಸೊರಬ. | ಅಭಿಯೋಗ ಉಪನಿರ್ದೇಶಕರು, ದಾವಣಗೆರೆ ವಿಭಾಗ, ದಾವಣಗೆರೆ. |
| (13) | ಪ್ರಧಾನ ಸರ್ಕಾರಿ ಅಭಿಯೋಜಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ. | ಸಹಾಯಕ ಸರ್ಕಾರಿ ಅಭಿಯೋಜಕರು: ಬಳ್ಳಾರಿ, ಕೂಡ್ಲಿಗಿ, ಹಡಗಲಿ, ಹೊಸಪೇಟೆ, ಸಿರಗುಪ್ಪ, ಸಂಡೂರು, ಹಗರಿಬೊಮ್ಮನಹಳ್ಳಿ. | ಅಭಿಯೋಗ ಉಪನಿರ್ದೇಶಕರು, ದಾವಣಗೆರೆ ವಿಭಾಗ, ದಾವಣಗೆರೆ. |
| (14) | ಪ್ರಧಾನ ಸರ್ಕಾರಿ ಅಭಿಯೋಜಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. | ಸಹಾಯಕ ಸರ್ಕಾರಿ ಅಭಿಯೋಜಕರು: ಮಂಗಳೂರು, ಬಂಟ್ವಾಳ, ಪುತ್ತೂರು, ಸುಳ್ಯ, ಬೆಳ್ತಂಗಡಿ. | ಅಭಿಯೋಗ ಉಪನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು. |
| (15) | ಪ್ರಧಾನ ಸರ್ಕಾರಿ ಅಭಿಯೋಜಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ. | ಸಹಾಯಕ ಸರ್ಕಾರಿ ಅಭಿಯೋಜಕರು: ಕಾರವಾರ, ಅಂಕೋಲ, ಹೊನ್ನಾವರ, ಭಟ್ಕಳ, ಯಲ್ಲಾಪುರ, ಹಳಿಯಾಳ, ಸಿದ್ದಾಪುರ, ಸಿರ್ಸಿ, ಕುಮಟಾ, ದಾಂಡೇಲಿ, ಮುಂಡಗೋಡು. | ಅಭಿಯೋಗ ಉಪನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು. |
| (16) | ಪ್ರಧಾನ ಸರ್ಕಾರಿ ಅಭಿಯೋಜಕರು, ಉಡುಪಿ ಜಿಲ್ಲೆ, ಉಡುಪಿ. | ಸಹಾಯಕ ಸರ್ಕಾರಿ ಅಭಿಯೋಜಕರು: ಉಡುಪಿ, ಕುಂದಾಪುರ, ಕಾರ್ಕಳ. | ಅಭಿಯೋಗ ಉಪನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು. |
| (17) | ಪ್ರಧಾನ ಸರ್ಕಾರಿ ಅಭಿಯೋಜಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು. | ಸಹಾಯಕ ಸರ್ಕಾರಿ ಅಭಿಯೋಜಕರು: ಚಿಕ್ಕಮಗಳೂರು, ತರೀಕೆರೆ, ಕಡೂರು, ನರಸಿಂಹರಾಜಪುರ, ಕೊಪ್ಪ, ಶೃಂಗೇರಿ, ಮೂಡಿಗೆರೆ. | ಅಭಿಯೋಗ ಉಪನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು. |
| (18) | ಪ್ರಧಾನ ಸರ್ಕಾರಿ ಅಭಿಯೋಜಕರು, ಬೆಳಗಾಂ ಜಿಲ್ಲೆ, ಬೆಳಗಾಂ. | ಸಹಾಯಕ ಸರ್ಕಾರಿ ಅಭಿಯೋಜಕರು: ಬೆಳಗಾಂ, ಖಾನಾಪುರ, ಚಿಕ್ಕೋಡಿ, ಅಥಣಿ, ರಾಯಭಾಗ್, ಹುಕ್ಕೇರಿ, ಬೈಲಹೊಂಗಲ, ಸವದತ್ತಿ, ರಾಮದುರ್ಗ, ನಿಪ್ಪಾಣಿ, ಗೋಕಾಕ್, ಸಂಕೇಶ್ವರ. | ಅಭಿಯೋಗ ಉಪನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. |
| (19) | ಪ್ರಧಾನ ಸರ್ಕಾರಿ ಅಭಿಯೋಜಕರು, ಧಾರವಾಡ ಜಿಲ್ಲೆ, ಧಾರವಾಡ. | ಸಹಾಯಕ ಸರ್ಕಾರಿ ಅಭಿಯೋಜಕರು: ಧಾರವಾಡ, ಹುಬ್ಬಳ್ಳಿ, ಕುಂದಗೋಳ, ಲಕ್ಷ್ಮೇಶ್ವರ, ನವಲಗುಂದ, ಕಲಘಟಗಿ. | ಅಭಿಯೋಗ ಉಪನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. |
| (20) | ಪ್ರಧಾನ ಸರ್ಕಾರಿ ಅಭಿಯೋಜಕರು, ಗದಗ್ ಜಿಲ್ಲೆ, ಗದಗ್. | ಸಹಾಯಕ ಸರ್ಕಾರಿ ಅಭಿಯೋಜಕರು: ಗದಗ್, ರೋಣ, ನರಗುಂದ, ಮುಂಡರಗಿ. | ಅಭಿಯೋಗ ಉಪನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. |
| (21) | ಪ್ರಧಾನ ಸರ್ಕಾರಿ ಅಭಿಯೋಜಕರು, ಹಾವೇರಿ ಜಿಲ್ಲೆ, ಹಾವೇರಿ. | ಸಹಾಯಕ ಸರ್ಕಾರಿ ಅಭಿಯೋಜಕರು: ಹಾವೇರಿ, ಹಾನಗಲ್, ರಾಣೇಬೆನ್ನೂರು, ಸವಣೂರು, ಹಿರೇಕೆರೂರು, ಬ್ಯಾಡಗಿ, ಶಿಗ್ಗಾಂವ್. | ಅಭಿಯೋಗ ಉಪನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. |
| (22) | ಪ್ರಧಾನ ಸರ್ಕಾರಿ ಅಭಿಯೋಜಕರು, ಬಿಜಾಪುರ ಜಿಲ್ಲೆ, ಬಿಜಾಪುರ. | ಸಹಾಯಕ ಸರ್ಕಾರಿ ಅಭಿಯೋಜಕರು, ಬಿಜಾಪುರ, ಬಸವನ ಬಾಗೇವಾಡಿ, ಮುದ್ದೇಬಿಹಾಳ, ಸಿಂಧಗಿ, ಇಂಡಿ, ಬನಹಟ್ಟಿ. | ಅಭಿಯೋಗ ಉಪನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. |
| (23) | ಪ್ರಧಾನ ಸರ್ಕಾರಿ ಅಭಿಯೋಜಕರು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ. | ಸಹಾಯಕ ಸರ್ಕಾರಿ ಅಭಿಯೋಜಕರು: ಬಾಗಲಕೋಟೆ, ಮುಧೋಳ, ಬಾದಾಮಿ, ಜಮಖಂಡಿ, ಹುನಗುಂದ, ಬೀಳಗಿ. | ಅಭಿಯೋಗ ಉಪನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. |

| 1 | 2 | 3 | 4 |
|---|---|---|---|
| (24) | ಪ್ರಧಾನ ಸರ್ಕಾರಿ ಅಭಿಯೋಜಕರು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ. | ಸಹಾಯಕ ಸರ್ಕಾರಿ ಅಭಿಯೋಜಕರು: ಗುಲ್ಬರ್ಗಾ, ಚಿತ್ತಾಪುರ, ಚಿಂಚೋಳಿ, ಸೇಡಂ, ಅಳಂದ, ಶೋರಾಪುರ, ಯಾದಗೀರ್, ಶಹಾಪುರ, ಜೇವರ್ಗಿ, ಅಫಜಲ್‌ಪುರ, ಶಹಾಬಾದ್. | ಅಭಿಯೋಗ ಉಪನಿರ್ದೇಶಕರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ. |
| (25) | ಪ್ರಧಾನ ಸರ್ಕಾರಿ ಅಭಿಯೋಜಕರು, ರಾಯಚೂರು ಜಿಲ್ಲೆ, ರಾಯಚೂರು. | ಸಹಾಯಕ ಸರ್ಕಾರಿ ಅಭಿಯೋಜಕರು: ರಾಯಚೂರು, ಮಾನ್ವಿ, ದೇವದುರ್ಗ, ಲಿಂಗಸುಗೂರು, ಸಿಂಧನೂರು. | ಅಭಿಯೋಗ ಉಪನಿರ್ದೇಶಕರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ. |
| (26) | ಪ್ರಧಾನ ಸರ್ಕಾರಿ ಅಭಿಯೋಜಕರು, ಕೊಪ್ಪಳ ಜಿಲ್ಲೆ, ಕೊಪ್ಪಳ. | ಸಹಾಯಕ ಸರ್ಕಾರಿ ಅಭಿಯೋಜಕರು: ಕೊಪ್ಪಳ, ಕುಷ್ಟಗಿ, ಯಲಬುರ್ಗಾ, ಗಂಗಾವತಿ. | ಅಭಿಯೋಗ ಉಪನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. |
| (27) | ಪ್ರಧಾನ ಸರ್ಕಾರಿ, ಅಭಿಯೋಜಕರು, ಬೀದರ್ ಜಿಲ್ಲೆ, ಬೀದರ್. | ಸಹಾಯಕ ಸರ್ಕಾರಿ ಅಭಿಯೋಜಕರು: ಬೀದರ್, ಬಾಲ್ಕಿ, ಹುಮ್ನಾಬಾದ್, ಔರಾದ್, ಬಸವಕಲ್ಯಾಣ. | ಅಭಿಯೋಗ ಉಪನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ. |

**ಆರ್.ಜಿ. ದೇಸಾಯಿ,**
ಪಿ.ಆರ್.1583 ಅಭಿಯೋಗ ಮತ್ತು ಸರ್ಕಾರಿ
ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ಜಿಲ್ಲಾ ನೋಂದಣಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ಇವರ ನಡವಳಿಗಳು

**ವಿಷಯ :** ಕೋಲಾರ ಜಿಲ್ಲೆಯಲ್ಲಿನ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀ ಪ್ರಿಯರಂಜನ್ ಜಿ.ಎಸ್.ಬಿನ್ ಸಿ.ಶೇಷಯ್ಯ, ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್:13:ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳು) ವಿಶೇಷ ನೇಮಕಾತಿ ನಿಯಮಗಳು 2001.
2. ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ರಿ-ಅಲಾಟ್‌ಮೆಂಟ್ ಆರ್ಡರ್ ಸಂಖ್ಯೆ: ಇಎಸ್‌ಟಿ:1-273/01-02, ದಿನಾಂಕ: 06.08.2005.
3. ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ:55/ 2004-05, ದಿನಾಂಕ: 30.08.2005.

**ಪ್ರಸ್ತಾವನೆ:**

ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ರೀ-ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ, ರೀ-ಅಲಾಟ್ ಮಾಡಿದ್ದರ ಮೇಲೆ, ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3)ರ ಈ ಕಛೇರಿಯ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಅದೇ ಆದೇಶದಲ್ಲಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ, ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3)ರ ಸದರಿ ನೇಮಕಾತಿ ಆದೇಶವನ್ನು ಆರ್.ಪಿ.ಎ.ಡಿ. ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್.ಸಿ.: ಎಸ್.ಟಿ. | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ನಿಯುಕ್ತಿಗೊಳಿಸಿದ ಕಛೇರಿ | ವರ್ಗೀಕರಣ |
|---|---|---|---|---|
| 1. | ಪ್ರಿಯರಂಜನ್ ಜಿ.ಎಸ್. S/o ಸಿ.ಶೇಷಯ್ಯ, ನಂ.217, MIG ನ್ಯೂ ಕಾಂತರಾಜ ಅರಸ್ ರೋಡ್, ಶಾರದಾದೇವಿನಗರ, ಮೈಸೂರು-23. | ಎಸ್.ಸಿ. | ಉಪನೋಂದಣಿ ಕಛೇರಿ, ಚಿಂತಾಮಣಿ, ಕೋಲಾರ ಜಿಲ್ಲೆ. | ಪರಿಶಿಷ್ಟ ಜಾತಿ ಸಾಮಾನ್ಯ ಅಭ್ಯರ್ಥಿ ಹೆಚ್ಚುವರಿ ಪಟ್ಟಿ. |

ಮೇಲ್ಕಂಡ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ: 02.09.2005ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಅವರನ್ನು ನೇಮಕ ಮಾಡಿದ ಕಛೇರಿಯಲ್ಲಿ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ: 17.09.2005ರಂದು ಮುಕ್ತಾಯವಾಗಿರುತ್ತದೆ. ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ನಂತರವೂ ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ 55/2004-05, ದಿನಾಂಕ: 15ನೇ ಅಕ್ಟೋಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18(3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀ ಪ್ರಿಯರಂಜನ್

ಜಿ.ಎಸ್. ಇವರನ್ನು ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ದ್ವಿತೀಯ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾ
ನೋಂದಣಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

ಪಿ.ಆರ್.1584

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ-I, ಬೈಂದೂರ್‌ವೆಲ್, ಕಂಕನಾಡಿ, ಮಂಗಳೂರು- ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್.46/05 ಆರ್. ದಿನಾಂಕ: 7ನೇ ಅಕ್ಟೋಬರ್, 2005**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು:**

ಅರ್ಜಿದಾರರು:

1. ಶ್ರೀಮತಿ ಲೀಲಾವತಿ ಎ.ಪಾಲನ್.
   ಗಂಡ: ದಿ: ಆನಂದ ಪಾಲನ್.
2. ಕುಮಾರಿ ಶುಭ ಎ. ಪಾಲನ್.
3. ಶ್ರೀಮತಿ ಜಯಲಕ್ಷ್ಮಿ ,,
4. ಕುಮಾರಿ ರಾಜಲಕ್ಷ್ಮಿ ,,
5. ಕುಮಾರಿ ಜ್ಯೋತಿಲಕ್ಷ್ಮಿ ,,
   ನಿವಾಸ: ಪಚ್ಚನಾಡಿ, ಮಂಗಳೂರು.

ಪ್ರತಿವಾದಿಗಳು:

1. ಶ್ರೀ ದಿನಕರ ತಂದೆ: ದೇಜಪ್ಪ ಪೂಜಾರಿ, ಬೊಟ್ಟು ಮನೆ, ಪಚ್ಚನಾಡಿ, ಬೊಂದೆಲ್ ಮಂಗಳೂರು.
2. ಶಾಖಾ ಅಧಿಕಾರಿ, ದಿ ಓರಿಯಂಟಲ್ ಇನ್ಸುರೆನ್ಸ್ ಕಂ.ಲಿ., ದ್ವಾರಕಾ 79, ಎಸ್‌ಎಚ್ ರೋಡ್, ಚೆನ್ನೈ 600 034.

**ಅಧಿಸೂಚನೆ**

ಅರ್ಜಿದಾರನಾದ/ ಅರ್ಜಿದಾರಳಾದ ಶ್ರೀಮತಿ/ ಶ್ರೀ. ಲೀಲಾವತಿ ಎ. ಪಾಲನ್ ಇವರು ತಮ್ಮ ಮಗನಾದ/ ಗಂಡನಾದ ಶ್ರೀ ರಾಜು ಪಾಲನ್ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ದಿನಕರ ತಂದೆ: ದೇವಪ್ಪ ಪೂಜಾರಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 28.05.2005ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪವಿಭಾಗ-1, ಮಂಗಳೂರು.

ಪಿ.ಆರ್.1585

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-4, ಕಾರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-560029**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ ಎಫ್‌ಸಿ:ಸಿಆರ್.70/05, ದಿನಾಂಕ: 29ನೇ ಸೆಪ್ಟೆಂಬರ್, 2005**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು:**

ಅರ್ಜಿದಾರರು:

1. ಶ್ರೀಮತಿ ಪುಟ್ಟಮ್ಮ ಕೋಂ ಲೇಟ್: ವೆಂಕಟದುರ್ಗಯ್ಯ, ಮತ್ತು ಇತರೆ 3 ಜನ.
   ವಿಳಾಸ: ದೊಡ್ಡಈರಂಗೆರೆ, ಬಿಜ್ಜಹಳ್ಳಿ ಪೋಸ್ಟ್, ಕೋಡಿಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಪ್ರತಿವಾದಿಗಳು:

1. ಜಯಣ್ಣ S/o ಹೊಬಾಳಯ್ಯ ದಿಣ್ಣೆಪಾಳ್ಯ, ಹೆರುನ್‌ಗೆರೆ, ಕೋಡಿಹಳ್ಳಿ, ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.
2. ದಿ ರಾಯಲ್ ಸುಂದರಂ ಅಲೆಯನ್ಸ್, ಇನ್ಸುರೆನ್ಸ್ ಕಂ.ಲಿ., ರೀಜನಲ್ ಆಫೀಸ್, ನಂ.132, ಬ್ರಿಗೇಡ್ ರಸ್ತೆ, ಬೆಂಗಳೂರು-25.

**ಪ್ರಕಟಣೆ**

ಅರ್ಜಿದಾರರಾದ ಪುಟ್ಟಮ್ಮ ಕೋಂ ಲೇಟ್ ವೆಂಕಟದುರ್ಗಯ್ಯ ಮತ್ತು ಇತರೆ 3 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಗಂತ ವೆಂಕಟದುರ್ಗಯ್ಯ ಇವರು ಪ್ರತಿವಾದಿ ಒಂದು ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ

ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್.1586 ಉಪವಿಭಾಗ-4, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-4, ಕಾರ್ಮಿಕಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-560029**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ ಎಫ್‌ಸಿ:ಸಿಆರ್.63/05, ದಿನಾಂಕ:6ನೇ ಅಕ್ಟೋಬರ್, 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ತಸನೀಮಾರ W/o ಲೇಟ್: ಅಲ್ಲಾಬಕಾಶ್ ಮತ್ತು ಇತರೆ 3 ಜನರು ಕೇರಾಫ್: ಮಹಮ್ಮದ್ ಜಾವಿದ್, 3(1) ಮಹಾವಿಷ್ಣು ಕಲ್ಯಾಣ ಮಂಟಪದ ಎದುರು, ಪಾರಂದಹಳ್ಳಿ ಪೋಸ್ಟ್, ಕೋಲಾರ ಜಿಲ್ಲೆ.

1. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಗ್ರಾಮಾಂತರ ವಿಭಾಗ, ವಿಭಾಗ ನಿಯಂತ್ರಣಾಧಿಕಾರಿ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ತಸನೀಮಾರ ಮತ್ತು ಇತರೆ 3 ಜನರು ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಗಂತ ಅಲ್ಲಾಬಕಾಶ್, ಇವರು ಪ್ರತಿವಾದಿ - ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್.1587 ಉಪವಿಭಾಗ-4, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ: ಕಾನಪ: 226/05, ದಿನಾಂಕ:10ನೇ ಅಕ್ಟೋಬರ್, 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು:**

1. ಸುರಯ್ಯಾ ಸತ್ತಾರ ಶೇಖ
2. ಜಯದಾ ಸತ್ತಾರ ಶೇಖ
3. ಆಶ್ನಾ ಸತ್ತಾರ ಶೇಖ
4. ರೇಶ್ಮಾ ಸತ್ತಾರ ಶೇಖ
5. ಸಲ್ಮಾ ಸತ್ತಾರ ಶೇಖ
6. ರಾಣಿ ಸತ್ತಾರ ಶೇಖ
7. ಇಬ್ರಾಹಿಂ ಸತ್ತಾರ ಶೇಖ

ಸಾ: ಎಲ್ಲರೂ ಇರುವುದು ಬಿಜಾಪುರದಲ್ಲಿ.

1. ಎಸ್.ಎಸ್. ವರ್ದೇಕರ, ಲಾರಿ ಮಾಲೀಕರು, ಲಾರಿ ನಂ.ಎಂ.ಹೆಚ್.-12/ಕ್ಯೂಎ/9597, ನಂ.110, ಪಶ್ಚಿಮ ಮಂಗಳವಾರಪೇಟೆ, ಸೊಲ್ಲಾಪುರ (ಮಹಾರಾಷ್ಟ್ರ).
2. ದಿ ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್ಸುರೆನ್ಸ್ ಕಂ. ಮಿನಿವಿಧಾನಸೌಧ ಎದುರಿಗೆ-ಗುಲ್ಬರ್ಗಾ.

**ಪ್ರಕಟಣೆ**

ಶ್ರೀ: ಶ್ರೀಮತಿ ಸುರಯ್ಯಾ ಸತ್ತಾರ ಶೇಖ್, ಜಯದಾ, ಆಶ್ನಾ, ರೇಶ್ಮಾ ಸಲ್ಮಾ ರಾಣಿ, ಇಬ್ರಾಹಿಂ, ಇವರುಗಳಾದ ತಾವು ಮೃತ ಸತ್ತಾರ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸತ್ತಾರ ಇವರು ಒಂದನೇ ಪ್ರತಿವಾದಿಗಳಾದ ಎಸ್.ಎಸ್.ವರ್ದೇಕರ ಇವರ ಲಾರಿಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕರಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಪರಿಹಾರ ಆಯುಕ್ತರು,

ಪಿ.ಆರ್.1588 ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ: ಕಾನಪ: 227/05, ದಿನಾಂಕ:10ನೇ ಅಕ್ಟೋಬರ್, 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು:**

ಅರ್ಜಿದಾರರು:
1. ಸುವರ್ಣಾ ತುಕಾರಾಮ ಕುಪಣೆ, ವ:30: ಉ: ಮನೆಗೆಲಸ.
2. ರೂಪಾಲಿ ತುಕಾರಾಮ ಕುಪಣೆ, ವ: ಅಪ್ರಾಪ್ತ.
3. ಅಶ್ವಿನಿ ತುಕಾರಾಮ ಕುಪಣೆ, ವ: ಅಪ್ರಾಪ್ತ.
4. ಸಚಿನ್ ತುಕಾರಾಮ್ ಕುಪಣೆ, ವ:ಅಪ್ರಾಪ್ತ.
5. ಪಾರ್ವತಿ ದಾಮೋದರ ಕುಪಣೆ ವ:55 ಉ: ಮನೆಗೆಲಸ.
ತಾ: ಎಲ್ಲರೂ ಇರುವುದು ಶಹಾಪೇಟೆ, ಬಿಜಾಪುರದಲ್ಲಿ.

ಪ್ರತಿವಾದಿಗಳು:
1. ಕಲ್ಯಾಣ ಆರ್. ಭೋಸಲೆ, ಲಾರಿ ಮಾಲೀಕರು ಲಾರಿ ನಂ.ಎಂಸಿಸಿ 1515, ಪಾ: ಸರಕೋಲಿ, ತಾ:ಪಂಡರಾಪುರ, ಜಿ: ಸೊಲ್ಲಾಪುರ.
2. ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಸಂಗಮೇಶ ನಗರ, ಗುಲ್ಬರ್ಗಾ.

**ಪ್ರಕಟಣೆ**

ಶ್ರೀಮತಿ ಸುವರ್ಣಾ ತುಕಾರಾಮ ಕಪಣೆ, ರೂಪಾಲಿ, ಅಶ್ವಿನಿ, ಸಚಿನ್, ಪಾರ್ವತಿ, ಇವರುಗಳಾದ ತಾವು ಮೃತ ತುಕರಾಮ ಇವರ ಹೆಂಡತಿ ಮತ್ತು ಮಕ್ಕಳು, ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ತುಕಾರಾಮ ಇವರು ಒಂದನೇ ಪ್ರತಿವಾದಿಗಳಾದ ಕಲ್ಯಾಣ ಆರ್. ಭೋಸಲೆ ಇವರ ಲಾರಿಯಲ್ಲಿ ಹಮಾಲ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕರಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.1589

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ: ಕಾನಪ: 218/05, ದಿನಾಂಕ:4ನೇ ಅಕ್ಟೋಬರ್, 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು:**

ಅರ್ಜಿದಾರರು:
1. ವಿಮಲ ಸಿದ್ರಾಮ ಗುಳೆ.
2. ನರಿ ಸಿದ್ರಾಮ ಗುಳೆ.
3. ಮನಿಷಾ ಸಿದ್ರಾಮ ಗುಳೆ
ತಾ: ಶಹಾಪೇಟೆಗಲ್ಲಿ, ಬಿಜಾಪುರ.

ಪ್ರತಿವಾದಿಗಳು:
1. ದಿನೇಶ್‌ಕುಮಾರ ಗಂಗಾಧರ ಗಾಯಕವಾಡ, ಲಾರಿ ಮಾಲೀಕರು ನಂ.ಎಂ.ಟಿ.ಡಿ/3594, ತಾ: ಶಿವಾಜಿನಗರ, ಸೊಲ್ಲಾಪುರ.
2. ಓರಿಯಂಟಲ್ ಇಶ್ಯೂರೆನ್ಸ್ ಕಂ. ಡಿವಿಜನಲ್ ಮ್ಯಾನೇಜರ್, ತಾ: ಗುಲ್ಬರ್ಗಾ.

**ಪ್ರಕಟಣೆ**

ಶ್ರೀಮತಿ ವಿಮಲ ಸಿದ್ರಾಮ ಗುಳೆ ಮತ್ತು ರವಿ ಸಿದ್ರಾಮ ಗುಳೆ, ಮನಿಷಾ ಸಿದ್ರಾಮ ಗುಳೆ, ಇವರುಗಳಾದ ತಾವು ಮೃತ ಸಿದ್ರಾಮ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಿದ್ರಾಮ ಇವರು ಒಂದನೇ ಪ್ರತಿವಾದಿಗಳಾದ ದಿನೇಶಕುಮಾರ ಗಂಗಾಧರ ಗಾಯಕವಾಡ ಇವರ ಲಾರಿಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕರಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.1590

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ನ್ಯಾಯಾಲಯ**

**ವಿಷಯ :** ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ರೀತ್ಯಾ ಅವಾರ್ಡ್‌ಗಿಂತ ಪೂರ್ವವಾಗಿ ಸ್ಥಿರಾಸ್ತಿಗಳ ಜಪ್ತಿ ಮಾಡುವ ಬಗ್ಗೆ.

**ಉಲ್ಲೇಖ :** ಈ ನ್ಯಾಯಾಲಯದ ಸಮಸಂಖ್ಯೆ: ನೋಟೀಸ್ ದಿನಾಂಕ: 18.07.2005.

ಶ್ರೀನಿವಾಸಪುರ ಕಸಬಾ ವ್ಯವಸಾಯ ಸೇವಾ ಸಹಕಾರ ಸಂಘ/ ಬ್ಯಾಂಕ್ ನಿ., ಶ್ರೀನಿವಾಸಪುರ ತಾಲ್ಲೂಕು ಇದರ ವ್ಯವಸ್ಥಾಪಕರಾದ ಶ್ರೀ ಬಿ.ಎಸ್. ರಾಮಕೃಷ್ಣಯ್ಯ (ಹಾಲಿ ಅಮಾನತ್ತಿನಲ್ಲಿ) ಹಾಗೂ ಮಾಜಿ ವ್ಯವಸ್ಥಾಪಕರು, ರೋಣೂರು ವ್ಯವಸಾಯ ಸೇವಾ ಸಹಕಾರ ಸಂಘ ನಿ., ಇವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರ ರೀತ್ಯಾ ಸರ್‌ಚಾರ್ಜ್ ಪ್ರಕರಣಗಳಲ್ಲಿ ರೂ.12,40,986.00 ಗಳ ವಸೂಲಾತಿಗಾಗಿ ಈ ಕಛೇರಿಯ ನ್ಯಾಯಾಲಯದಲ್ಲಿ ಎರಡು ಸ್ವಯಂಪ್ರೇರಿತ ಅಧಿಭಾರ ಪ್ರಕರಣಗಳು ದಾಖಲಿಸಿದ್ದು ಇವುಗಳ ಕ್ರಮಾಂಕ: ಎಆರ್-49:ಎಂಕೆಟಿ: ಸರ್‌ಚಾರ್ಜ್:8:2005-06 ಮತ್ತು ಎಆರ್:49: ಎಂಕೆಟಿ:ಸರ್‌ಚಾರ್ಜ್:25:2004-05 ಆಗಿರುತ್ತದೆ.

ಶ್ರೀ ಬಿ.ಎಸ್. ರಾಮಕೃಷ್ಣಯ್ಯ, ವ್ಯವಸ್ಥಾಪಕರು, ಇವರು ವಿರುದ್ಧ ನಡೆಸುತ್ತಿರುವ ಅಧಿಭಾರ ಪ್ರಕರಣಗಳಲ್ಲಿ ನೀಡಬಹುದಾದ ಆದೇಶ ಯಾ ತೀರ್ಪನ್ನು ನಿರರ್ಥಕಗೊಳಿಸಲು ಉದ್ದೇಶಿಸಿರುತ್ತಾರೆಂದು ನನ್ನ ಗಮನಕ್ಕೆ ಬಂದ ಕಾರಣ ಶ್ರೀ ಬಿ.ಎಸ್. ರಾಮಕೃಷ್ಣಯ್ಯ ಬಿನ್ ಸೀತಾರಾಮಯ್ಯ ಇವರ ಪತ್ನಿ ಶ್ರೀಮತಿ ವೆಂಕಟಲಕ್ಷ್ಮಮ್ಮರವರ ಹೆಸರಿನಲ್ಲಿರತಕ್ಕ ಮನೆಗಳನ್ನು ಮತ್ತು ಜಮೀನುಗಳನ್ನು ಪರಭಾರ ಮಾಡಲು ಉದ್ದೇಶಿಸಿರುತ್ತಾರೆಂದು ತಿಳಿದುಬಂದ ಹಿನ್ನೆಲೆಯಲ್ಲಿ ಈ ಕಛೇರಿಯ ನ್ಯಾಯಾಲಯದ ನೋಟೀಸ್ ರೀತ್ಯಾ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಕಾಯ್ದೆ ಕಲಂ 103ರ ಮೇರೆಗೆ ಷರತ್ತಿಗೊಳಪಟ್ಟು ಜಪ್ತಿ ಮಾಡಲು ಆದೇಶ ನೀಡಲಾಗಿತ್ತು. ಸದರೀ ಆದೇಶವನ್ನು ಶ್ರೀ ಬಿ.ಎಸ್. ರಾಮಕೃಷ್ಣಯ್ಯರವರಿಗೆ ದಿನಾಂಕ: 25.07.2005ರಂದು ಜಾರಿ ಮಾಡಲಾಗಿತ್ತು. ಸದರಿ ಆದೇಶವನ್ನು ತೆರವುಗೊಳಿಸಲು ಶ್ರೀ ಬಿ.ಎಸ್.ರಾಮಕೃಷ್ಣಯ್ಯ ಬಿನ್ ಸೀತಾರಾಮಯ್ಯರವರು ಉದ್ದೇಶಿಸಿದ್ದಲ್ಲಿ ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೋಲಾರ ಇದರ ಕೇಂದ್ರ ಕಛೇರಿಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ,

ಕೋಲಾರ (ಈ ಕೆಳ ಸಹಿದಾರರ) ಇವರ ಹೆಸರಿನಲ್ಲಿ ರೂ.12,40,986.00 ಗಳನ್ನು ಅಮಾನತ್ ಖಾತೆಯಲ್ಲಿ ದಿನಾಂಕ: 30.07.2005ರ ಒಳಗೆ ಠೇವಣಿ ಮಾಡಿ ದಾಖಲಾತಿಗಳನ್ನು ಸಲ್ಲಿಸಲು ಸೂಚಿಸಲಾಗಿತ್ತು. ಆದರೆ ಈ ತಹಲ್‌ವರೆವಿಗೂ ನೀವು ಮೇಲ್ಕಂಡ ಹಣವನ್ನು ಠೇವಣಿ ಮಾಡದೇ ಇರುವುದರಿಂದ ಈ ಹಿಂದೆ ತಾತ್ಕಾಲಿಕ ಜಪ್ತಿ ಆದೇಶದಲ್ಲಿ ನಮೂದಿಸಿದ್ದ ಸ್ಥಿರಾಸ್ತಿಗಳನ್ನು ಜಪ್ತೀಗೀಡು ಮಾಡದೇ ಷರತ್ತಿನಲ್ಲಿ ನಮೂದಿಸುವಂತೆ ಠೇವಣಿ ಇಡಲು ವಿಫಲರಾಗಿದ್ದ ಕಾರಣ ಈ ಹಿಂದೆ ದಿನಾಂಕ: 18.07.2005ರ ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಮೇರೆಗೆ ಜಪ್ತಿಗೊಳಪಟ್ಟು ಆದೇಶವನ್ನು ಸ್ಥಿರೀಕರಣಗೊಳಿಸುವುದು ಅಗತ್ಯವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ನೀಡಲಾಗಿದೆ.

**ಆದೇಶ**

**ಕ್ರಮ ಸಂಖ್ಯೆ: ಎಆರ್‌ಕೆ: ಎಂಕೆಟಿ:ಎಬಿಜೆ:56:2005-06, ದಿನಾಂಕ: 10ನೇ ಅಕ್ಟೋಬರ್, 2005**

ಮೇಲೆ ವಿವರಿಸಿರುವ ಕಾರಣಗಳಿಗಾಗಿ ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಮೇರೆಗೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ಮೇರೆಗೆ ನನಗೆ ದತ್ತವಾಗಿರುವ ಅಧಿಕಾರದನ್ವಯ ಕೋಲಾರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರಾದ ಶ್ರಿ ಉಮಾಕಾಂತ್ ಆದ ನಾನು ಈ ಕೆಳಗಿನ ಷೆಡ್ಯೂಲ್‌ನಲ್ಲಿ ವಿವರಿಸಲಾದಂತಹ ಶ್ರೀ ಬಿ.ಎಸ್. ರಾಮಕೃಷ್ಣಯ್ಯ ಬಿನ್ ಸೀತಾರಾಮಯ್ಯ, ಮಾಜಿ ವ್ಯವಸ್ಥಾಪಕರು, ರೋಣೂರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಹಾಗೂ ಕಸಬಾ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿ., ಶ್ರೀನಿವಾಸಪುರ ತಾಲ್ಲೂಕು ಇವರ ಪತ್ನಿ ಶ್ರೀಮತಿ ಜಿ.ವಿ. ವೆಂಕಟಲಕ್ಷ್ಮಮ್ಮ ಇವರಿಗೆ ಸೇರಿರುವ ಸ್ಥಿರಾಸ್ತಿಗಳನ್ನು ಪರಭಾರ ಮಾಡಲು ಸಾಧ್ಯವಾಗದಂತೆ ಈ ಕಛೇರಿಯ ನ್ಯಾಯಾಲಯದಲ್ಲಿ ಬಾಕಿ ಇರುವ ಅಧಿಭಾರ ಪ್ರಕರಣಗಳ ತೀರ್ಪು ಕಾಯ್ದಿರಿಸಿ ಜಪ್ತಿ ಮಾಡಲು ಆದೇಶಿಸಿದೆ.

**ಷೆಡ್ಯೂಲ್**

ಈ ಕೆಳಕಂಡ ಸ್ವತ್ತುಗಳು ಶ್ರೀ ಬಿ.ಎಸ್. ರಾಮಕೃಷ್ಣಯ್ಯ ಬಿನ್ ಸೀತಾರಾಮಯ್ಯ, ಮಾಜಿ ವ್ಯವಸ್ಥಾಪಕರು, ರೋಣೂರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಹಾಗೂ ಶ್ರೀನಿವಾಸಪುರ ಕಸಬಾ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಇವರ ಪತ್ನಿ ಶ್ರೀಮತಿ ಜಿ.ವಿ. ವೆಂಕಟಲಕ್ಷ್ಮಮ್ಮ ಇವರಿಗೆ ಸಂಬಂಧಿಸಿದ ಆಸ್ತಿಯ ವಿವರಗಳಾಗಿರುತ್ತದೆ.

| ಕ್ರ. ಸಂ. | ಕಬ್ಜೆದಾರರ ಹೆಸರು ಮತ್ತು ಸ್ವತ್ತಿನ ಸ್ಥಳ | ಖಾತೆ ನಂ. | ಸರ್ವೆ ನಂ. | ವಿಸ್ತೀರ್ಣ |
|---|---|---|---|---|
| 1. | ಶ್ರೀಮತಿ ಜಿ.ವಿ. ವೆಂಕಟಲಕ್ಷ್ಮಮ್ಮ ಕೋಂ. ಬಿ.ಎಸ್.ರಾಮಕೃಷ್ಣಯ್ಯ, ಚಿಂತಾಮಣಿ. | 4548 | 4223 | 40x30<br>40x12 $^{1}/_{2}$ ಮನೆ |
| 2. | ಶ್ರೀಮತಿ ಜಿ.ವಿ. ವೆಂಕಟಲಕ್ಷ್ಮಮ್ಮ ಕೋಂ. ಬಿ.ಎಸ್. ರಾಮಕೃಷ್ಣಯ್ಯ, ಚಿಂತಾಮಣಿ. | 5935 | 5507 | 19+21<br>$^{1}/_{2}$<br>+48x56/2 |

ಈ ಆದೇಶವನ್ನು ಈ ದಿನ ದಿನಾಂಕ: 10.10.2005ರಂದು ನನ್ನ ಸಹಿ ಮತ್ತು ಈ ನ್ಯಾಯಾಲಯದ ಮುದ್ರೆಯೊಂದಿಗೆ ನೀಡಲಾಗಿದೆ.

**ಉಮಾಕಾಂತ್**

ಪಿ.ಆರ್.1592

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಕೋಲಾರ ಉಪವಿಭಾಗ, ಕೋಲಾರ.

## ಪೊಲೀಸ್ ಇಲಾಖೆ

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ:24/ಡಿಸಿಪಿ/ ಸಂ.ಪೂ/ 2005, ಬೆಂಗಳೂರು ದಿನಾಂಕ:7ನೇ ಅಕ್ಟೋಬರ್, 2005**

ಬೆಂಗಳೂರು ನಗರ ಆಡುಗೋಡಿ ಸಂಚಾರ ಉಪವಿಭಾಗ ವ್ಯಾಪ್ತಿಗೆ ಬರುವ ಪ್ರಮುಖ ರಸ್ತೆಗಳಾದ ಹೊಸೂರು ರಸ್ತೆ, ಬನ್ನೇರುಘಟ್ಟ ರಸ್ತೆ ಮತ್ತು ಸರ್ಜಾಪುರ ರಸ್ತೆಗಳಲ್ಲಿ ಎಲ್ಲಾ ತರಹದ ವಾಹನಗಳ ಸಂಚಾರವಿದ್ದು ಸರಾಸರಿ ಪ್ರತಿ ಒಂದು ಗಂಟೆಗೆ 16 ಸಾವಿರ ವಾಹನಗಳು ಈ ರಸ್ತೆಗಳಲ್ಲಿ ಸಂಚರಿಸುತ್ತಿದ್ದು, ಸಹಜವಾಗಿಯೇ ಬಿ.ಎಂ.ಟಿ.ಸಿ., ಕೆ.ಎಸ್.ಆರ್.ಟಿ.ಸಿ. ಮತ್ತು ಇತರೆ ಸಾರ್ವಜನಿಕ ಲಘು ವಾಹನಗಳ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿರುತ್ತದೆ. ಹಾಗೂ ಈ ರಸ್ತೆಗಳಲ್ಲಿ ಹೆಚ್ಚಿನ ಸಂಖ್ಯೆಯ ಬಾರೀ ಸರಕು ಸಾಗಣೆ ವಾಹನಗಳ ಸಂಚರಣೆಯಿಂದಾಗಿ ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಹಾಗೂ ಹೆಚ್ಚಿನ ಅಪಘಾತಗಳು ಸಂಭವಿಸುತ್ತಿರುವುದು ಕಂಡು ಬಂದಿರುತ್ತದೆ. ದಿನಾಂಕ:22.09.2005ರಂದು ನಡೆದ ಸರ್ಕಾರದ ಉನ್ನತ ಸಭೆಯಲ್ಲಿ ಈ ಮೇಲ್ಕಂಡ ರಸ್ತೆಗಳಲ್ಲಿ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದಲ್ಲದೆ ಸಂಭವಿಸುತ್ತಿರುವ ರಸ್ತೆ ಅಪಘಾತಗಳಲ್ಲಿ ನಿಯಂತ್ರಿಸುವ ಸಲುವಾಗಿ ಸಂಚಾರ ಮಾರ್ಪಾಡುಗಳನ್ನು ಮಾಡುವ ಬಗ್ಗೆ ಚರ್ಚಿಸಲಾಗಿರುತ್ತದೆ. ಪ್ರಯುಕ್ತ ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಈ ರಸ್ತೆಗಳಲ್ಲಿ ವಾಹನ ದಟ್ಟಣೆಯನ್ನು ತಗ್ಗಿಸಲು ಹಾಗೂ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಹಾಗೂ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಈಗಾಗಲೇ ಬಾರೀ ಸರಕು ಸಾಗಣೆ ವಾಹನಗಳ ಸಂಚಾರವನ್ನು ಬೆಳಿಗ್ಗೆ 8.00 ಗಂಟೆಯಿಂದ 10.00 ಗಂಟೆವರೆಗೆ ಮತ್ತು ಸಂಜೆ 5.00 ಗಂಟೆಯಿಂದ 8.00 ಗಂಟೆವರೆಗೆ ಬಾರೀ ಸರಕು ಸಾಗಣೆ ವಾಹನಗಳ ಎರಡೂ ಕಡೆ ಸಂಚಾರವನ್ನು ನಿರ್ಬಂಧಿಸಲಾಗಿದ್ದು, ನಿರ್ಬಂಧದ ಈ ವೇಳೆಯನ್ನು ಮಾರ್ಪಡಿಸುವುದು ಅವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ: 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ರಸ್ತೆಗಳಲ್ಲಿ ಬೆಳಗ್ಗೆ 7.30 ಗಂಟೆಯಿಂದ 10.00 ಗಂಟೆವರೆಗೆ ಮತ್ತು ಸಂಜೆ 5.00 ಗಂಟೆಯಿಂದ ರಾತ್ರಿ 9.00 ಗಂಟೆವರೆಗೆ ಬಾರೀ ಸರಕು ಸಾಗಣೆ ವಾಹನಗಳ ಎರಡೂ ಕಡೆ ಸಂಚಾರವನ್ನು ನಿರ್ಬಂಧಿಸಿ ಆದೇಶಿಸಿರುತ್ತೇನೆ.

1. ಹೊಸೂರು ರಸ್ತೆ - ಸಿಲ್ಕ್ ಬೋರ್ಡ್ ಜಂಕ್ಷನ್‌ನಿಂದ ಚಂದಾಪುರದವರೆಗೆ.
2. ಬನ್ನೇರುಘಟ್ಟ ರಸ್ತೆ - ಜೆ.ಡಿ. ಮರ ಜಂಕ್ಷನ್‌ನಿಂದ ಮೀನಾಕ್ಷಿ ದೇವಸ್ಥಾನದವರೆಗೆ.
3. ಹೊರ ವರ್ತುಲ ರಸ್ತೆ - ಇಬ್ಲೂರು ಜಂಕ್ಷನ್‌ನಿಂದ ಜೆ.ಡಿ. ಮರ ಜಂಕ್ಷನ್‌ವರೆಗೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 10.10.2005ರಿಂದ ಒಂದು ತಿಂಗಳ ಕಾಲ ಪ್ರಾಯೋಗಿಕವಾಗಿ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 07.10.2005ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**

ಪಿ.ಆರ್.1593 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಪೊಲೀಸ್ ಇಲಾಖೆ

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ:25/ಡಿಸಿಪಿ/ ಸಂ.ಪೂ/ 2005, ಬೆಂಗಳೂರು ದಿನಾಂಕ:14ನೇ ಅಕ್ಟೋಬರ್, 2005**

ಬೆಂಗಳೂರು ನಗರದ ಹೃದಯ ಭಾಗದಲ್ಲಿರುವ ಪ್ರಮುಖ ರಸ್ತೆಗಳಾದ ರಾಷ್ಟ್ರೀಯ ವಿದ್ಯಾಲಯ ರಸ್ತೆ (ಆರ್.ವಿ. ರಸ್ತೆ), ಅವೆನ್ಯೂ ರಸ್ತೆ, ಸಂಪಿಗೆ ರಸ್ತೆ, ಲಾಲ್‌ಬಾಗ್ ರಸ್ತೆ, ನ್ಯೂ ಮಿಷಿನ್ ರಸ್ತೆ, ಬಿ.ವಿ.ಕೆ. ಅಯ್ಯಂಗಾರ್ ರಸ್ತೆ, ಆಸ್ಪತ್ರೆ ರಸ್ತೆ, ಗಾಂಧಿನಗರ ರಸ್ತೆಗಳು, ಕೆಂಪೇಗೌಡ 1, 2 ಮತ್ತು 3ನೇ ಅಡ್ಡ ರಸ್ತೆಗಳು, ಕನ್ನಿಂಗ್‌ಹ್ಯಾಂ ರಸ್ತೆ ಮತ್ತು ಮಿಲ್ಲರ್ ರಸ್ತೆಗಳು ಪ್ರಾರಂಭದಲ್ಲಿ ನಿರ್ಮಾಣಗೊಂಡ ಸ್ಥಿತಿಯಲ್ಲಿಯೇ ಇದ್ದು ಇವುಗಳ ಅಗಲೀಕರಣದಲ್ಲಿ ಯಾವುದೇ ಬದಲಾವಣೆಯಾಗದೆ ಇರುತ್ತವೆ. ಇವುಗಳು ನಿರ್ಮಾಣಗೊಂಡ ಸಮಯದಲ್ಲಿದ್ದ ನಗರ ಸಂಚಾರವು ವರ್ಷದಿಂದ ವರ್ಷಕ್ಕೆ ದುಪ್ಪಟ್ಟುಗೊಂಡು ಪ್ರಸ್ತುತದ ಸಂಚಾರ ಸಾಂದ್ರತೆಯನ್ನು ತೆಗೆದುಕೊಳ್ಳಲು ಈ ರಸ್ತೆಗಳು ಸಮರ್ಥವಾಗಿರದೆ ಆಗಾಗ್ಗೆ ಸಂಚಾರದಲ್ಲಿ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೂ ಕಾರಣವಾಗುತ್ತಿದೆ. ಈ ರಸ್ತೆಗಳ ಪೈಕಿ ಭಾಗಶಃ ರಸ್ತೆಗಳು ಏಕಮುಖ ಸಂಚಾರ ವ್ಯವಸ್ಥೆ ಹೊಂದಿದ್ದರೂ ಸಹ ರಸ್ತೆಗಳ ಒಂದು ಬದಿಯಲ್ಲಿ ವಾಹನಗಳ ನಿಲುಗಡೆ ಇರುವುದರಿಂದ ಸಂಚಾರ ಸ್ಥಗಿತಗೊಳ್ಳಲು ಮತ್ತು ಅಪಘಾತಗಳಿಗೆ ಮತ್ತೊಂದು ಪ್ರಮುಖ ಕಾರಣವಾಗಿರುತ್ತದೆ. ಈ ರಸ್ತೆಗಳಲ್ಲಿನ ಸಂಚಾರ ಸ್ಥಗಿತ ಮತ್ತು ಅಸ್ತವ್ಯಸ್ತತೆಯನ್ನು ತಹಬಂದಿಗೆ ತರಲು ಕಷ್ಟಸಾಧ್ಯವಾಗಿರುತ್ತೆ. ಪ್ರಯುಕ್ತ ಈ ರಸ್ತೆಗಳಲ್ಲಿ ಹಾಲಿ ಇರುವ ನಿಲುಗಡೆ ವ್ಯವಸ್ಥೆಯನ್ನು ನಿರ್ಬಂಧಿಸಿ ಸಾರ್ವಜನಿಕರ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿ ಕಂಡುಬಂದಿರುತ್ತದೆ. ಇದರ ಬಗ್ಗೆ ಸಾರ್ವಜನಿಕರಿಂದ ಅನೇಕ ಅಹವಾಲು ಬಂದಿವೆ ಮತ್ತು ಮಹಾನಗರ ಪಾಲಿಕೆ ಮತ್ತು ಇತರೆ ಸಂಸ್ಥೆಗಳಿಂದ ಕೆಲವು ಕಡೆ ವಾಹನ ನಿಲುಗಡೆಯನ್ನು ನಿರ್ಬಂಧಿಸಬೇಕೆಂದು ಸಲಹೆಗಳು ಸಹ ಸ್ವೀಕರಿಸಲಾಗಿದೆ.

ಜೆ.ಸಿ. ರಸ್ತೆ ಮತ್ತು ಕೆಂಪೇಗೌಡ ರಸ್ತೆಗಳಲ್ಲಿ ಸಾಕಷ್ಟು ವಾಹನ ನಿಲುಗಡೆಗಾಗಿ ಬಹುಮಹಡಿ ಕಟ್ಟಡಗಳನ್ನು ಮಹಾನಗರ ಪಾಲಿಕೆ ರವರು ನಿರ್ಮಾಣ ಮಾಡಿದ್ದು ಸಾರ್ವಜನಿಕರು ಅವುಗಳನ್ನು ಉಪಯೋಗಿಸಬಹುದಾಗಿದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ್ ಸಿಂಹ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ರಸ್ತೆಗಳಲ್ಲಿ ಅವುಗಳ ಮುಂದೆ ತೋರಿಸಿರುವ ಭಾಗದಲ್ಲಿ ವಾಹನಗಳ ಎರಡೂ ಕಡೆ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಿ ಆದೇಶಿಸಿರುತ್ತೇನೆ.

| | | |
|---|---|---|
| 1. | ರಾಷ್ಟ್ರೀಯ ವಿದ್ಯಾಲಯ ರಸ್ತೆ (ಆರ್.ವಿ. ರಸ್ತೆ) - | ಲಾಲ್‌ಬಾಗ್ ಪಶ್ಚಿಮ ದ್ವಾರದಿಂದ ಮಿನರ್ವ ವೃತ್ತದವರೆಗೆ. |
| 2. | ಅವೆನ್ಯೂ ರಸ್ತೆ - | ಸಿಟಿ ಮಾರ್ಕೆಟ್ ಚೌಕದಿಂದ ಆಸ್ಪತ್ರೆ ರಸ್ತೆ ಜಂಕ್ಷನ್‌ವರೆಗೆ. |
| 3. | ಸಂಪಿಗೆ ರಸ್ತೆ - | ಮಲ್ಲೇಶ್ವರಂ ವೃತ್ತದಿಂದ 18ನೇ ಕ್ರಾಸ್ ಜಂಕ್ಷನ್‌ವರೆಗೆ. |
| 4. | ಲಾಲ್‌ಬಾಗ್ ರಸ್ತೆ - | ಲಾಲ್‌ಬಾಗ್ ರಸ್ತೆ 4ನೇ ಕ್ರಾಸ್‌ನಿಂದ ಲಾಲ್‌ಬಾಗ್ ಮುಖ್ಯ ದ್ವಾರದವರೆಗೆ. |
| 5. | ನ್ಯೂ ಮಿಷಿನ್ ರಸ್ತೆ - | ಪೂರ್ಣಿಮ ಥಿಯೇಟರ್ ಜಂಕ್ಷನ್‌ನಿಂದ ಶಿವಾಜಿ ಜಂಕ್ಷನ್‌ವರೆಗೆ (ಕನ್ನಡ ಭವನ ವರೆಗೆ) |
| 6. | ಬಿ.ವಿ.ಕೆ. ಅಯ್ಯಂಗಾರ್ ರಸ್ತೆ - | ಕೆಂಪೇಗೌಡ ಜಂಕ್ಷನ್‌ನಿಂದ ದೊಡ್ಡಪೇಟೆ ವೃತ್ತದವರೆಗೆ. |
| 7. | ಆಸ್ಪತ್ರೆ ರಸ್ತೆ - | ಬಳೇಪೇಟೆ ರಸ್ತೆ ಜಂಕ್ಷನ್‌ನಿಂದ ಅವೆನ್ಯೂ ರಸ್ತೆ ಜಂಕ್ಷನ್‌ವರೆಗೆ (ಅಭಿನಯ ಜಂಕ್ಷನ್ ಮುಖಾಂತರ) |
| 8. | ಗಾಂಧಿನಗರ 1ನೇ ಮುಖ್ಯ ರಸ್ತೆ - | ಕನಕದಾಸ ವೃತ್ತದಿಂದ ಸಾಗರ್ ಜಂಕ್ಷನ್‌ವರೆಗೆ |
| 9. | ಗಾಂಧಿನಗರ 1ನೇ ಅಡ್ಡ ರಸ್ತೆ - | ಗಿರಿಯಾಸ್ ನಿಂದ ತ್ರಿಭುವನ್ ಚಿತ್ರಮಂದಿರದವರೆಗೆ. |
| 10. | ಗಾಂಧಿನಗರ 5ನೇ ಮುಖ್ಯ ರಸ್ತೆ - | ತ್ರಿಭುವನ್ ಚಿತ್ರಮಂದಿರದಿಂದ ಜನತಾ ಬಜಾರ್‌ವರೆಗೆ |
| 11. | ಕೆಂಪೇಗೌಡ ರಸ್ತೆಯ 1, 2 ಮತ್ತು 3ನೇ ಅಡ್ಡ ರಸ್ತೆಗಳು - | |
| 12. | ಕನ್ನಿಂಗ್‌ಹ್ಯಾಂ ರಸ್ತೆ - | ಬಾಳೆಕುಂದ್ರಿ ವೃತ್ತದಿಂದ ಚಂದ್ರಿಕಾ ಜಂಕ್ಷನ್‌ವರೆಗೆ. |
| 13. | ಮಿಲ್ಲರ್ ರಸ್ತೆ - | ಚಂದ್ರಿಕಾ ಜಂಕ್ಷನ್‌ನಿಂದ ಕಂಟೋನ್ಮೆಂಟ್ ರೈಲ್ವೆ ಕೆಳ ಸೇತುವೆ ವರೆಗೆ |

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:24.10.2005ರಿಂದ ಒಂದು ತಿಂಗಳ ಕಾಲ ಪ್ರಾಯೋಗಿಕವಾಗಿ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:14.10.2005ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಡಾ: ಅಜಯಕುಮಾರ ಸಿಂಹ**

ಪಿ.ಆರ್.1594 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ: ಎಲ್.ಆರ್.ಎಫ್(ಎ)ಸಿಆರ್-03/2005-06, ದಿನಾಂಕ: 16ನೇ ನವೆಂಬರ್ 2005**

**ವಿಷಯ :** ವರ್ಲ್ಡ್ ಸ್ಕೂಲ್ ಪ್ರೈ.ಲಿ. ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ.264 ರಲ್ಲಿ 4.00 ಎ/ ಗುಂ. ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ವರ್ಲ್ಡ್ ಸ್ಕೂಲ್ ಪ್ರೈ.ಲಿ. ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ264 ರಲ್ಲಿ 4.00 ಎ/ಗುಂ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್. (109) ಸಿಆರ್(ಎ) 9/05-06, ದಿನಾಂಕ: 9.11.2005 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 264 ರಲ್ಲಿ 4.00 ಎ/ಗುಂ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) (11) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಕಂಪನಿಗಳ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಇಲ್ಲಿ ದಿನಾಂಕ: 24.1.2005 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1) (11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ.264 ರಲ್ಲಿ 4-00 ಎ/ಗುಂ ಜಮೀನನ್ನು ವರ್ಲ್ಡ್ ಸ್ಕೂಲ್ ಪ್ರೈ.ಲಿ., ನಂ.29, 1ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾಯಿಸಬಾರದು.
3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ. ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1820 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಸಂಖ್ಯೆ: ಡಿಆರ್:ಡಿವಿಜಿ:ಸಮಾಪನೆ:ಎಡಿಎಂ:43:2000-01, ದಿನಾಂಕ: 18ನೇ ನವೆಂಬರ್ 2005**

**ವಿಷಯ :** ಸಮಾಪನೆಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ, ಹಲವಾಗಿಲು ಹರಪನಹಳ್ಳಿ ತಾ: ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರಡಿಯಲ್ಲಿ ಪುನಃ ಶ್ಚೇತನಗೊಳಿಸಲು ಆದೇಶಿಸುವ ಕುರಿತು.

**ಉಲ್ಲೇಖ :** 1) ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 12.06.2001.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ, ಇವರ ಪತ್ರ ಸಂಖ್ಯೆ: ಹೆಚ್ಆರ್‌ಪಿ: ಸಮಾಪನೆ: ಎಬೀಸಸಂ: ಸಿಆರ್:2005-06, ದಿನಾಂಕ: 24.10.2005.

3) ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರ ಪತ್ರ ದಿನಾಂಕ: 14.10.2005.
4) ವ್ಯವಸ್ಥಾಪಕ ನಿರ್ದೇಶಕರು, ಪ್ರಾದೇಶಿಕ ಎಣ್ಣೆ ಬೀಜ ಬೆಳೆಗಾರರ ಸ. ಸಂ. ನಿ. ಗಳ ಒಕ್ಕೂಟ ನಿ ಚಿತ್ರದುರ್ಗ ಇವರ ಪತ್ರ ಸಂಖ್ಯೆ: ಸಿಆರ್‌ಯು:ಎಂಡಿ:2005-06, ದಿನಾಂಕ: 04.08.2005.

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1) ರ ಈ ಕಛೇರಿಯ ಆದೇಶದ ಪ್ರಕಾರ ಇದನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ (4) ರಲ್ಲಿ ವ್ಯವಸ್ಥಾಪಕ ನಿರ್ದೇಶಕರು ಪ್ರಾದೇಶಿಕ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘಗಳ ಒಕ್ಕೂಟ ನಿ, ಚಿತ್ರದುರ್ಗ ಇವರು ಸದರಿ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ ಒಕ್ಕೂಟವು ಶೀಘ್ರದಲ್ಲಿ ಕ್ರಮವಿಡುವುದಾಗಿ ತಿಳಿಸುತ್ತಾ ಸದರಿ ಸಂಘವನ್ನು ಪುನಃ ಶ್ಚೇತನಗೊಳಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರನ್ನು ಕೋರಿರುತ್ತಾರೆ. ಅದರಂತೆ ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರು ಸಂಘವನ್ನು ಪುನಃಶ್ಚೇತನಗೊಳಿಸಲು ಉಲ್ಲೇಖ-3ರ ಪತ್ರದಲ್ಲಿ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹರಪನಹಳ್ಳಿ ಇವರು ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ದಿನಾಂಕ: 20.10.2005 ರಂದು ಈ ಕಛೇರಿಯಲ್ಲಿ ಜರುಗಿದ ಸಮಾಪನಾಧಿಕಾರಿಯವರ ಸಭೆಯಲ್ಲಿ ಸದರಿ ಸಂಘವನ್ನು ಪುನಃಶ್ಚೇತನಕ್ಕೆ ಆದೇಶ ಹೊರಡಿಸುವುದು ಸೂಕ್ತವೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರು ಅಭಿಪ್ರಾಯ ಪಟ್ಟಿರುತ್ತಾರೆ. ಆದ ಪ್ರಯುಕ್ತ ಸಂಘವನ್ನು ಕಾರ್ಯ ಪ್ರವರ್ತನ್ನಾಗಿ ಮಾಡಲು ಸಂಘದ ಸದಸ್ಯರು ಶ್ರಮಿಸಬೇಕೆಂಬ ನಿಬಂಧನೆಗೆ ಒಳಪಟ್ಟು ಉಲ್ಲೇಖ-1ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿಯನ್ನು ನೀಡಲು ಉದ್ದೇಶಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ. ಆಶಾ, ಕೆ.ಸಿ.ಎಸ್. ಆದ ನಾನು ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ, ಹಲವಾಗಿಲು ಹರಪನಹಳ್ಳಿ ತಾ: ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗಳಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ರಚಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 18.11.2005 ರಂದು ನನ್ನ ಸ್ವಹಸ್ತ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

ಪಿ.ಆರ್. 1841 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಸಂಖ್ಯೆ: ಡಿಆರ್:ಡಿವಿಜಿ:ಸಮಾಪನೆ:ಸಿಆರ್-45:2002-03/ಎಡಿಎಂ, ದಿನಾಂಕ: 18ನೇ ನವೆಂಬರ್ 2005**

**ವಿಷಯ :** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸಾಸ್ವೆಹಳ್ಳಿ, ಹರಪನಹಳ್ಳಿ ತಾ: ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರಡಿಯಲ್ಲಿ ಪುನಃಶ್ಚೇತನಗೊಳಿಸಲು ಆದೇಶಿಸಿರುವ ಕುರಿತು.

**ಉಲ್ಲೇಖ :** 1) ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 30.09.2003.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ, ಇವರ ಪತ್ರ ಸಂಖ್ಯೆ:ಸನಿ:ಹೆಚ್‌ಆರ್‌ಪಿ:ಸಮಾಪನೆ: ಸಿಆರ್:2005-06, ದಿನಾಂಕ: 24.10.2005.
3) ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರ ಪತ್ರ ದಿನಾಂಕ: 17.10.2005.

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1) ರ ಮತ್ತು ಕಛೇರಿಯ ಆದೇಶದ ಪ್ರಕಾರ ಇದನ್ನು ಸಮಾಪನೆಗೊಳಿಸಲಾಗಿತ್ತು. ಸಾಸ್ವೆಹಳ್ಳಿ ಗ್ರಾಮದಲ್ಲಿ ಸಾಕಷ್ಟು ಮಳೆಯಾಗಿದ್ದು, ಹೈನು ಉತ್ಪಾದನೆ ಅಧಿಕಗೊಂಡಿರುತ್ತದೆ ಹಾಗೂ ಎಲ್ಲಾ ಸದಸ್ಯರು ಹಾಲನ್ನು ಪೂರೈಸಲು ತಯಾರಿರುತ್ತಾರೆ. ಹಾಗೂ ಹಾಲು ಮಾರಾಟಕ್ಕೆ ಅನುಕೂಲವಾಗಲು ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಕೋರಿರುವ ಕಾರಣ ಸಂಘವನ್ನು ಪುನಃಶ್ಚೇತನಗೊಳಿಸಲು ಉಲ್ಲೇಖ (3) ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರು ತಿಳಿಸಿರುತ್ತಾರೆ. ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಸಹ ಸಂಘವನ್ನು ಪುನಃಶ್ಚೇತನಗೊಳಿಸಬೇಕಾಗಿ ಶಿಫಾರಸ್ಸು ಮಾಡಿರುತ್ತಾರೆ. ಆದ ಪ್ರಯುಕ್ತ ಸಂಘವನ್ನು ಕಾರ್ಯಪ್ರವರ್ತವನ್ನಾಗಿ ಮಾಡಲು ಸಂಘದ ಸದಸ್ಯರು ಶ್ರಮಿಸಬೇಕೆಂಬ ನಿಬಂಧನೆಗೆ ಒಳಪಟ್ಟು ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿಯನ್ನು ನೀಡಲು ಉದ್ದೇಶಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ. ಆಶಾ, ಕೆ.ಸಿ.ಎಸ್. ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸಾಸ್ವೆಹಳ್ಳಿ, ಹರಪನಹಳ್ಳಿ ತಾ: ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗಳಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ರಚಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 18.11.2005 ರಂದು ನನ್ನ ಸ್ವಹಸ್ತ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

ಪಿ.ಆರ್. 1842 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ ಕಾರ್ಯಾಲಯ

**ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/09/2005-06, ದಿನಾಂಕ: 9ನೇ ನವೆಂಬರ್ 2005**

**ವಿಷಯ :** ಸ್ಥಗಿತಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ, ನೀಲಗುಂದ ಹರಪನಹಳ್ಳಿ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪ್ರಸ್ತಾವನೆ ದಿನಾಂಕ: 24.6.2005.

2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ಪತ್ರ ದಿನಾಂಕ: 22.5.2005.

3) ಸಹಕಾರಿ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ ಇವರ ಪತ್ರ ದಿನಾಂಕ: .......2005

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಉಲ್ಲೇಖ (1) ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಅವರಿಗೆ ನೋಟೀಸು ಜಾರಿಯಾದ ಬಗ್ಗೆ ಉಲ್ಲೇಖ (3) ರಲ್ಲಿ ಸ್ವೀಕೃತಿ ಈ ಕಛೇರಿಗೆ ತಲುಪಿದೆ. ಸಂಘದ ಸದಸ್ಯರು ಸಂಘವನ್ನು ಮುಂದುವರಿಸಿಕೊಂಡು ಹೋಗುವ ಬಗ್ಗೆ ಸಮಜಾಯಿಷಿ ನೀಡಿರುವುದಿಲ್ಲ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ.ಆಶಾ, ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಹಾಲು ಉತ್ಪಾದಕರ ಸಹಕಾರ ಸಂಘ ನಿ, ನೀಲಗುಂದ ಹರಪನಹಳ್ಳಿ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ರನ್ವಯ ಸಹಕಾರಿ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 9.11.2005 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಪಿ.ಆರ್. 1843 ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

## ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿಗಳು

**ಸಂಖ್ಯೆ: ಸಿಬ್ಬಂದಿ.ಶಿಸ್ತು.ಟ್ರಾಪ.21:99-2000, ದಿನಾಂಕ: 22ನೇ ನವೆಂಬರ್ 2005**

**ವಿಷಯ :** ಶ್ರೀ ಈರದಾಸಪ್ಪ, ಈರಪ್ಪ ದ್ವಿ.ದ.ಭೂ. ಭೂದಾಖಲೆಗಳ ಇಲಾಖೆ, ಬೀಳಗಿ, ಬಾಗಲಕೋಟೆ ಜಿಲ್ಲೆ ಇವರ ಮೇಲಿನ ಲಂಚ ಸ್ವೀಕಾರ ಪ್ರಕರಣದಲ್ಲಿ ಆರೋಪವು ಸಾಬೀತಾಗಿದ್ದು, ಸದರಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಉಲ್ಲೇಖ :** 1) ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಂಗ್ ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್‌ಒಕೆ.ಐಎನ್‌ವಿ.(ಜಿ):ಎಲ್-44: ಸಿಆರ್.10:99 : ಬಿಜಿಕೆಟಿ, ದಿನಾಂಕ: 13.10.99.

2) ಭೂ.ಜಂ.ನಿ. ಬೆಳಗಾವಿ ಇವರ ನಡವಳಿ ಆದೇಶ ಸಂಖ್ಯೆ: ಸಿಬ್ಬಂದಿ ಶಿಸ್ತು.ಟ್ರಾಪ್.20:99-2000, ದಿನಾಂಕ: 17.11.99 ಮತ್ತು 30.05.2000.

3) ಬಾಗಲಕೋಟೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ವಿಶೇಷ ನ್ಯಾಯಾಧೀಶರು ಇವರ ವಿಶೇಷ ಕೇಸ್ ನಂ: 46:2001, ದಿನಾಂಕ: 21.06.2005.

4) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಒಕೆ. ಐಎನ್‌ವಿ(ಜಿ) ಎಲ್-44:ಸಿಆರ್ 10:99:ಬಿಜಿಕೆಟಿ, ದಿನಾಂಕ: 22.7.2005.

5) ಅಪರ ಆರಕ್ಷಕ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಒಕೆ.ಐಎನ್‌ವಿ.(ಜಿ) ಎಲ್-44:ಸಿಆರ್ 10:99:ಬಿಜಿಕೆಟಿ, ದಿನಾಂಕ: 22.7.2005ನ್ನು ಅಭಿಯೋಗ ನಿರ್ದೇಶಕರು, ಅಭಿಯೋಜನೆ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರಿಗೆ ವಿಳಾಸಿಸಿ ಅದರ ಪ್ರತಿ ಈ ಕಛೇರಿಗೆ ಕಳುಹಿಸುವುದು.

6) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95, ದಿನಾಂಕ: 26.6.96.

7) ಈ ಕಛೇರಿಯ ಇದೇ ಸಮಸಂಖ್ಯೆ ದಿನಾಂಕ: 20.8.2005ರ ಪತ್ರವನ್ನು ಸರ್ಕಾರಕ್ಕೆ ವಿಳಾಸಿಸಿರುವುದು.

8) ಸರ್ಕಾರದ ಪತ್ರ ಸಂಖ್ಯೆ: ಕಂಇ 135.ಭೂದಾಸೇ(3) 2005, ದಿನಾಂಕ: 1.10.2005.

**ಪ್ರಸ್ತಾವನೆ:**

ಶ್ರೀ ಈರದಾಸಪ್ಪ ಈರಪ್ಪ, ದ್ವಿತೀಯ ದರ್ಜೆ ಭೂಮಾಪಕರು ಇವರು ಈ ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ಬೀಳಗಿ, ಬಾಗಲಕೋಟೆ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಂಗ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವರದಿ ಪ್ರಕಾರ ಶ್ರೀ ಕೆ.ಎಂ. ಯಳಗುತ್ತಿ, ಸಾ: ಸುನಗಾ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರು ದಿನಾಂಕ: 15.09.1999 ರಂದು ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ ಠಾಣೆಯಲ್ಲಿ ಹಾಜರಾಗಿ ಶ್ರೀ ಈರದಾಸಪ್ಪ ಈರಪ್ಪ, ದ್ವಿತೀಯ ದರ್ಜೆ ಭೂಮಾಪಕರು, ಭೂದಾಖಲೆಗಳ ಇಲಾಖೆ, ಬೀಳಗಿ ಇವರ ವಿರುದ್ಧ ದೂರು ನೀಡಿ ಸರ್ವೆ ನಂಬರ್ 43, ಸುನಗ ಗ್ರಾಮದ ಭೂಮಿಯನ್ನು ಮೋಜಣಿ ಮಾಡಲು ರೂ.5.00-00 (ಐದು ನೂರು ರೂಪಾಯಿ) ಗಳ ಲಂಚವನ್ನು ಕೇಳಿದರೆಂದೂ ಬಾಗಲಕೋಟೆ ಲೋಕಾಯುಕ್ತರು ಟ್ರಾಪ್ ಮಾಡಿ ಇವರ ವಿರುದ್ಧ ಠಾಣೆ ಗುನ್ಹೆ ಸಂಖ್ಯೆ: 10:99 ರಲ್ಲಿ ಕ್ರಿಮಿನಲ್ ಪ್ರಕರಣವನ್ನು ದಾಖಲಾಗಿರುತ್ತದೆ. ಹಿಂದಿನ ಭೂದಾಖಲೆಗಳ ಜಂಟಿ ನಿರ್ದೇಶಕರು, ಬೆಳಗಾಂ ಇವರ ನಡಾವಳಿ ದಿನಾಂಕ: 17.11.99ರ ಆದೇಶದಲ್ಲಿ ಸದರಿ ಆರೋಪಿತ ನೌಕರರನ್ನು ಅಮಾನತ್ತಿನಲ್ಲಿಟ್ಟು ಅವರು ಹೊಂದಿರುವ ಹುದ್ದೆಯ ಹಕ್ಕನ್ನು ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹಾವೇರಿ ಕಛೇರಿಗೆ ವರ್ಗಾಯಿಸಲಾಗಿರುತ್ತದೆ. ದಿನಾಂಕ: 30.5.2000ರ ಆದೇಶದಲ್ಲಿ ಅಮಾನತ್ತಿನಿಂದ ತೆರವುಗೊಳಿಸಿ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶಿರಸಿ ಕಛೇರಿಗೆ ಪುನರ್ ನೇಮಕ ಮಾಡಿದಂತೆ ದಿನಾಂಕ: 05.06.2000ರ ಪೂರ್ವಾಹ್ನ ಕೆಲಸಕ್ಕೆ ಹಾಜರಾಗಿರುತ್ತಾರೆ.

ಇವರ ವಿರುದ್ದದ ಕ್ರಿಮಿನಲ್ ಪ್ರಕರಣವು ಬಾಗಲಕೋಟೆ ಪ್ರಧಾನ ಜಿಲ್ಲಾ ಮತ್ತು ಪತ್ರ ನ್ಯಾಯಾಲಯದ ವಿಶೇಷ 46:2001 ರಲ್ಲಿ ದಿನಾಂಕ: 16.11.2000 ರಂದು ಆರೋಪಿಯನ್ನು ಅಭಿಯೋಜನೆಗೆ ಒಳಪಡಿಸಿದ್ದು, ಆರೋಪಿ ವಿರುದ್ಧದ ಆರೋಪವು ಸಾಬೀತಾಗಿ ದಿನಾಂಕ: 21.06.2005 ರಂದು ಬಾಗಲಕೋಟೆ ಪ್ರಧಾನ ಜಿಲ್ಲಾ ಮತ್ತು ಪತ್ರ ನ್ಯಾಯಾಲಯದ ವಿಶೇಷ ನ್ಯಾಯಾಧೀಶರು ತೀರ್ಪು ನೀಡಿ ಆರೋಪಿಗೆ 1998ರ ಲಂಚ ವಿರೋಧ ಕಾಯಿದೆ ಕಲಂ 7 ರಲ್ಲಿ ಮಾಡಿದ ಅಪರಾಧಕ್ಕಾಗಿ ಆರೋಪಿಗೆ 6 ತಿಂಗಳ ಶಿಕ್ಷೆ ಮತ್ತು ರೂ.500.00 ದಂಡ, ದಂಡ ಕೊಡಲು ತಪ್ಪಿದಲ್ಲಿ ಇನ್ನೂ ಒಂದು ತಿಂಗಳು ಸಾದಾ ಶಿಕ್ಷೆ ಮತ್ತು ಸದರಿ ಕಾಯಿದೆ ಕಲಂ 13(1)ಡಿ ಸಹವಾಚ 13(2)ರ ಪ್ರಕಾರ ಮಾಡಿದ ಅಪರಾಧಕ್ಕಾಗಿ ಒಂದು ವರ್ಷ ಶಿಕ್ಷೆ ಮತ್ತು ರೂ.500-00 ಗಳ ದಂಡ, ದಂಡ ಕೊಡಲು ತಪ್ಪಿದಲ್ಲಿ ಒಂದು ತಿಂಗಳ ಸಾದಾ ಶಿಕ್ಷೆ ವಿಧಿಸಿ ಆದೇಶ ನೀಡಿರುತ್ತಾರೆ.

ಉಲ್ಲೇಖ (4)ರ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 22.7.2005ರ ಪತ್ರದಲ್ಲಿ ಆರೋಪಿತ ನೌಕರರು ಮಾಡಿದ ಅಪರಾಧಕ್ಕಾಗಿ ಬಾಗಲಕೋಟೆ ಜಿಲ್ಲಾ ಪ್ರಧಾನ ಮತ್ತು ಸತ್ರ ನ್ಯಾಯಾಲಯದಲ್ಲಿ ಆರೋಪವು ಸಾಬೀತಾಗಿರುವುದರಿಂದ ಆರೋಪಿತ ನೌಕರರನ್ನು ತಕ್ಷಣದಿಂದ ಸೇವೆಯಿಂದ ವಜಾಗೊಳಿಸುವಂತೆ ಸೂಕ್ತ ಕ್ರಮ ಕೈಗೊಳ್ಳಲು ಹಾಗೂ ತೆಗೆದುಕೊಂಡ ಕ್ರಮದ ಬಗ್ಗೆ ವರದಿ ನೀಡಲು ಕೋರಿರುತ್ತಾರೆ.

ಉಲ್ಲೇಖ (5) ದಿನಾಂಕ: 22.7.2005ರ ಪತ್ರವನ್ನು ಅಭಿಯೋಜನೆ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶನಾಲಯ, ಬೆಂಗಳೂರು ಇವರಿಗೆ ವಿಳಾಸಿಸಿ ಅದರ ಪ್ರತಿಯನ್ನು ಈ ಕಛೇರಿಗೆ ಕಳುಹಿಸಿರುವ ಪತ್ರದಲ್ಲಿ ಸದರಿ ತೀರ್ಪಿನ ವಿರುದ್ಧ ಈ ಪ್ರಕರಣದಲ್ಲಿ ಹೆಚ್ಚಿನ ಶಿಕ್ಷೆಗಾಗಿ ಮೇಲ್ಮನವಿ ಸಲ್ಲಿಸಲು ಅರ್ಹರಾಗಿರುವುದಿಲ್ಲವೆಂದೂ ಸರ್ಕಾರಿ ಅಭಿಯೋಜಕರು ಅಭಿಪ್ರಾಯ ಪಟ್ಟಿರುತ್ತಾರೆ ಹಾಗೂ ಮೇಲ್ಮನವಿ ಸಲ್ಲಿಸಲು ಕೊನೆಯ ದಿನಾಂಕ: 23.09.2005 ಎಂದು ಸಹ ತಿಳಿಸಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿ.ಆ.ಸಿ.ಈ. 9 ಸೇಣಿವಿ 95, ದಿನಾಂಕ: 26.09.96 ರಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(1) ಅನುಸಾರ ಸದರಿ ನಿಯಮಗಳು ನಿಯಮಗಳು 11, 12 ಮತ್ತು 13 ರಲ್ಲಿ ಏನೇ ಹೇಳಲಾಗಿದ್ದರೂ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷ ಸಿದ್ಧಿಯಾದ ಸರ್ಕಾರಿ ನೌಕರರನ್ನು ಪುನಃ ಇಲಾಖಾ ವಿಚಾರಣೆಗೆ ಒಳಪಡಿಸದೆಯೇ, ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ಅಥವಾ ಕೆಳದರ್ಜೆಗೆ ಇಳಿಸುವ ದಂಡನೆಯನ್ನು ವಿಧಿಸಬಹುದಾಗಿದೆ ಎಂದು ಆದೇಶವಿರುತ್ತದೆ.

ಈ ಪ್ರಕರಣದಲ್ಲಿ ಉಲ್ಲೇಖ (7)ರ ಈ ಕಛೇರಿಯ ದಿನಾಂಕ: 20.08.2005 ರಲ್ಲಿ ಸದರಿ ಆರೋಪಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ, ಅನುಮತಿ ನೀಡಲು ಕೋರಿ ಸರ್ಕಾರಕ್ಕೆ ಪತ್ರ ಬರೆಯಲಾಗಿ ಉಲ್ಲೇಖ (8)ರ ದಿನಾಂಕ: 01.10.2005ರ ಸರ್ಕಾರದ ಪತ್ರದಲ್ಲಿ ಸರ್ಕಾರಿ ಸುತ್ತೋಲೆ ದಿನಾಂಕ: 26.06.96 ರಲ್ಲಿ ಸೂಚನೆಗಳನ್ವಯ ಅಗತ್ಯ ಕ್ರಮ ಕೈಗೊಳ್ಳುವಂತೆ ಆದೇಶ ನೀಡಿರುವ ಹಿನ್ನೆಲೆಯಲ್ಲಿ ಅಲ್ಲದೇ ಇದುವರೆವಿಗೂ ಯಾವ ನ್ಯಾಯಾಲಯದಿಂದಲೂ ತಡೆ ಆಜ್ಞೆಯಾಗಲಿ ಅಥವಾ ಮೇಲ್ಮನವಿ ಆಗಲಿ ಈ ದಿನಾಂಕದವರೆಗೂ ಸ್ವೀಕೃತವಾಗಿರುವುದಿಲ್ಲವೆಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಈ ಪ್ರಕರಣದಲ್ಲಿ ವಿಚಾರಣೆ ನಡೆಸಿದ ಬಾಗಲಕೋಟೆ ಮಾನ್ಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ವಿಶೇಷ ನ್ಯಾಯಾಧೀಶರು ನೀಡಿರುವ ತೀರ್ಪನ್ನು ಹಾಗೂ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಆದೇಶ ಮತ್ತು ಸರ್ಕಾರದ ಸುತ್ತೋಲೆ ದಿನಾಂಕ: 26.06.1996ರ ಗಳಲ್ಲಿನ ಆದೇಶಗಳನ್ನು ಪರಿಶೀಲಿಸಿ, ಇವರ ವಿರುದ್ಧ ಕ್ರಿಮಿನಲ್ ಪ್ರಕರಣದ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 57ರ ನಿಯಮ 14(i) ರನುಸಾರ ಸದರಿ ನಿಯಮಗಳ ನಿಯಮಗಳು 11, 12 ಮತ್ತು 13 ರಲ್ಲಿ ಏನೇ ಹೇಳಲಾಗಿದ್ದರೂ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ಧಿಯಾದ ಸರ್ಕಾರಿ ನೌಕರರನ್ನು ಪುನಃ ಇಲಾಖಾ ವಿಚಾರಣೆ ಒಳಪಡಿಸದೆಯೇ ಸೇವೆಯಿಂದ ವಜಾ ಮಾಡುವ ಬಗ್ಗೆ ಅಭಿಪ್ರಾಯ ಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದಲ್ಲಿ ಜಿ.ವಿ. ರಾಮಚಂದ್ರ, ಭಾ.ಆ.ಸೇ., ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9(3) ರಲ್ಲಿ ಓದಿಕೊಂಡು ನಿಯಮ 8(viii) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಈರದಾಸಪ್ಪ ಈರಪ್ಪ, ದ್ವಿತೀಯ ದರ್ಜೆ ಭೂಮಾಪಕರು, ತಹಸೀಲ್ದಾರ್, ಗಂಗಾವತಿ ಕಛೇರಿ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣವೇ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿದ್ದೇನೆ.

ಆಯುಕ್ತರು,

ಪಿ.ಆರ್. 1844 ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು, ಬೆಂಗಳೂರು.

**PUBLIC NOTICE**
**SANCHAYA INVESTMENTS LIMITED**
**Regd off: No.3, Krishna Reddy Building,**
**Kagadasapura Main Road, Bangalore - 560 075**

Notice is hereby given for general information that the members of SANCHAYA INVESTMENTS LIMITED at the Extra-ordinary General Meeting of the Company held on 28th December 2005 at No. 10, 80 Feet Road, Opposite 20 NDDB Qrs, Koramangala Village, Bangalore - 560 095 have passed the following Special Resolution to wind up the above company voluntarily:

"**RESOLVED THAT** the Company be and is hereby wound up voluntarily as a member's voluntary winding up".

Place : Bangalore
Dated : 28th December 2005

By Order of Board
**K. VENUGOPAL SHETTY**
Liquidator

**FORM NO. 151**
**(SEE RULE 315)**
**Members' Voluntary Winding Up Notice of Appointment of Liquidator pursuant to section 516**

| | |
|---|---|
| Name of the Company | SANCHAYA INVESTMENTS LIMITED |
| Nature of Business | Investment company. |
| Address of Registered Office | No.3, Krishna Reddy Building,<br>Kagadasapura Main Road, Bangalore - 560 075 |
| Name & Address of Liquidator | K. Venugopal Shetty<br>No. 32, 10th Cross, Kumarapark, West,<br>Railway P Road, Bangalore - 560 020. |
| Date of Appointment | 28th December 2005 |
| By whom appointed | Members in their meeting held on 28.12.2005 |

Place : Bangalore
Dated : 28th December 2005

**K. VENUGOPAL SHETTY**
Liquidator

**ಫಾರಂ ನಂ. 151**
**(ಕಾಯ್ದೆ 3156ನ್ನು ನೋಡಿ) ಸದಸ್ಯ ಸ್ವಯಂ ನಿವೃತ್ತಿಯ ಬಗ್ಗೆ ಸೆಕ್ಷನ್ 516ಕ್ಕೆ ಅನುಸಾರ ಲಿಕ್ವಿಡೇಟರ್ ನೇಮಕದ ಬಗ್ಗೆ ಪ್ರಕಟಣೆ**

| | |
|---|---|
| ಕಂಪನಿಯ ಹೆಸರು | ಸಂಚಯ ಇನ್ ವೆಸ್ಟ್‌ಮೆಂಟ್ಸ್ ಲಿಮಿಟೆಡ್ |
| ವ್ಯಾಪಾರದ ಲಕ್ಷಣ | ಬಂಡವಾಳ ಕಂಪನಿ |
| ರಿಜಿಸ್ಟರ್ಡ್ ಕಛೇರಿಯ ಹೆಸರು ಮತ್ತು ವಿಳಾಸ | ನಂ.3, ಕೃಷ್ಣಾರೆಡ್ಡಿ ಬಿಲ್ಡಿಂಗ್ ಕಗ್ಗದಾಸಪುರ ಮುಖ್ಯರಸ್ತೆ,<br>ಬೆಂಗಳೂರು-560 075. |
| ಲಿಕ್ವಿಡೇಟರ್‌ರವರ ಹೆಸರು ಮತ್ತು ವಿಳಾಸ | ಕೆ. ವೇಣುಗೋಪಾಲ ಶೆಟ್ಟಿ,<br>ನಂ.32, 10ನೇ ಕ್ರಾಸ್, ಕುಮಾರಪಾರ್ಕ್ ಪಶ್ಚಿಮ,<br>ರೈಲ್ವೆ ಸಮಾಂತರ ರಸ್ತೆ, ಬೆಂಗಳೂರು-560 020. |
| ಆಯ್ಕೆಯ ದಿನಾಂಕ | 28ನೇ ಡಿಸೆಂಬರ್ 2005 |
| ಯಾರಿಂದ ಆಯ್ಕೆಯಾದದ್ದು | 28.12.2005 ರಂದು ನಡೆದ ಸದಸ್ಯರ ಸಭೆಯಲ್ಲಿ ಸದಸ್ಯರಿಂದ |

ಸ್ಥಳ: ಬೆಂಗಳೂರು
ದಿನಾಂಕ: 28ನೇ ಡಿಸೆಂಬರ್ 2005

**ಕೆ. ವೇಣುಗೋಪಾಲ ಶೆಟ್ಟಿ**
ಲಿಕ್ವಿಡೇಟರ್

**ಸಂಚಯ ಇನ್‌ವೆಸ್ಟ್‌ಮೆಂಟ್ ಲಿಮಿಟೆಡ್**
**ನೋಂದಾಯಿತ ಕಚೇರಿ, ನಂ.3, ಕೃಷ್ಣಾರೆಡ್ಡಿ ಬಿಲ್ಡಿಂಗ್, ಕಗ್ಗದಾಸಪುರ, ಮುಖ್ಯರಸ್ತೆ, ಬೆಂಗಳೂರು-560 075**
**ಸಾರ್ವಜನಿಕ ಪ್ರಕಟಣೆ**

ಸಾರ್ವಜನಿಕ ಮಾಹಿತಿಗಾಗಿ ತಿಳಿಸುವುದೇನೆಂದರೆ ಸಂಚಯ ಇನ್‌ವೆಸ್ಟ್‌ಮೆಂಟ್ಸ್ ಲಿಮಿಟೆಡ್‌ನ ಸದಸ್ಯರ 28.12.2005, ನಂ.10, 80 ಅಡಿರಸ್ತೆ, 20 ಎನ್‌ಡಿಡಿಬಿ ಕ್ವಾರ್ಟರ್ಸ್‌ನ ಎದುರು, ಕೋರಮಂಗಲ ಗ್ರಾಮ, ಬೆಂಗಳೂರು-95 ಇಲ್ಲಿ ಕಂಪನಿಯ ವಿಶೇಷ ಸಾಮಾನ್ಯ ಸಭೆಯಲ್ಲಿ ಮೇಲೆ ಸೂಚಿಸಿದ ಕಂಪನಿಯನ್ನು ಮುಚ್ಚಲು ವಿಶೇಷ ಠರಾವನ್ನು ಮಂಡಿಸಿ ಅಂಗೀಕರಿಸಲಾಯಿತು.

ಕಂಪನಿಯನ್ನು ಸ್ವಯಂ ಆಗಿ, ಸದಸ್ಯರ ಸ್ವಯಂ ಆಗಿ, ಮುಚ್ಚುವ ನಿರ್ಣಯದಂತೆ ಮುಚ್ಚುವ ತೀರ್ಮಾನಿಸಲಾಗಿದೆ.

ಸ್ಥಳ: ಬೆಂಗಳೂರು
ದಿನಾಂಕ: 28ನೇ ಡಿಸೆಂಬರ್ 2005
ಪಿ.ಡಿ. 118

**ಕೆ. ವೇಣುಗೋಪಾಲ ಶೆಟ್ಟಿ**
ಲಿಕ್ವಿಡೇಟರ್

**ಕೆರೆ ಅಭಿವೃದ್ಧಿ ಪ್ರಾಧಿಕಾರ**
**ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಕಛೇರಿ, ಕೆರೆ ಅಭಿವೃದ್ಧಿ ಪ್ರಾಧಿಕಾರ,**
**ನಂ. 49, 2ನೇ ಮಹಡಿ, ಪರಿಸರ ಭವನ, ಚರ್ಚ್ ಸ್ಟ್ರೀಟ್, ಬೆಂಗಳೂರು - 01**
**ತಿದ್ದುಪಡಿ ಸಂ: ಮುಕಾಅ/ಕೆಅಪ್ರಾ/ಆರ್‌ಐಎ/29/05-06/739, ದಿನಾಂಕ: 26ನೇ ಅಕ್ಟೋಬರ್ 2005**

ಮಾಹಿತಿ ಹಕ್ಕು ಕಾಯ್ದೆ, 2005 ರಲ್ಲಿ ಈ ಕಛೇರಿ ಸಮಸಂಖ್ಯೆ ಪತ್ರದ ದಿನಾಂಕ: 19.9.2005ರಂದು ಹೊರಡಿಸಿರುವ ಆದೇಶದಲ್ಲಿ ಈ ಕೆಳಕಂಡಂತೆ ಮಾರ್ಪಾಡು ಮಾಡಲಾಗಿದೆ:-

| ಮಾಹಿತಿ ಹಕ್ಕು ಕಾಯ್ದೆ, 2005 ಸೆಕ್ಷನ್ 5 (1) ಅಡಿಯಲ್ಲಿ | 'ಸಾರ್ವಜನಿಕ ಮಾಹಿತಿ ಅಧಿಕಾರಿ' ಯಾಗಿ ನೇಮಕ | ಕೆಲಸದ ಸ್ಥಳ |
|---|---|---|
| | 2. ಪ್ರಾದೇಶಿಕ ನಿರ್ದೇಶಕರು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಳಗಾಂ | ಬೆಳಗಾಂ ಕೋಟೆಕೆರೆ ಸಂಬಂಧ |
| | ಪ್ರಾದೇಶಿಕ ನಿರ್ದೇಶಕರು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಳಗಾಂ, ಇವರ ಜಾಗದಲ್ಲಿ ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಬೆಳಗಾಂ, ಇವರನ್ನು ನೇಮಿಸಲಾಗಿದೆ. | |

| | | |
|---|---|---|
| ಮಾಹಿತಿ ಹಕ್ಕು ಕಾಯ್ದೆ, 2005ರ ಸೆಕ್ಷನ್ 5 (2) ಅಡಿಯಲ್ಲಿ | **'ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ' ಯಾಗಿ ನೇಮಕ** | |
| | 2. ಮೀನುಗಾರಿಕೆ ಸಹಾಯ ನಿರ್ದೇಶಕರು, ಪ್ರಾದೇಶಿಕ ನಿರ್ದೇಶಕರ ಕಛೇರಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಳಗಾಂ | ಬೆಳಗಾಂ ಕೋಟೆಕೆರೆ ಸಂಬಂಧ |
| | ಮೀನುಗಾರಿಕೆ ಸಹಾಯ ನಿರ್ದೇಶಕರು, ಪ್ರಾದೇಶಿಕ ನಿರ್ದೇಶಕರ ಕಛೇರಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಳಗಾಂ, ಇವರ ಜಾಗದಲ್ಲಿ ಕಾರ್ಯಪಾಲಕ ಅಭಿಯಂತರರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಬೆಳಗಾಂ, ಇವರನ್ನು ನೇಮಿಸಲಾಗಿದೆ. | |

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು,
ಕೆರೆ ಅಭಿವೃದ್ಧಿ ಪ್ರಾಧಿಕಾರ

## ಕೆರೆ ಅಭಿವೃದ್ಧಿ ಪ್ರಾಧಿಕಾರ

**ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಕಛೇರಿ, ಕೆರೆ ಅಭಿವೃದ್ಧಿ ಪ್ರಾಧಿಕಾರ,**
**ನಂ. 49, 2ನೇ ಮಹಡಿ, ಪರಿಸರ ಭವನ, ಚರ್ಚ್ ಸ್ಟ್ರೀಟ್, ಬೆಂಗಳೂರು - 01**

**ಅಧಿಸೂಚನೆ ಸಂ: ಮುಕಾಅ/ಕೆಅಪ್ರಾ/ಆರ್‌ಐಎ/29/05-06/, ದಿನಾಂಕ: 26ನೇ ಅಕ್ಟೋಬರ್ 2005**

ಮಾಹಿತಿ ಹಕ್ಕು ಕಾಯ್ದೆ, 2005 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆರೆ ಅಭಿವೃದ್ಧಿ ಪ್ರಾಧಿಕಾರಕ್ಕೆ ಸಂಬಂಧಿಸಿದಂತೆ, ಕೂಡಲೇ ಜಾರಿಗೆ ಬರುವಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ:

| ಮಾಹಿತಿ ಹಕ್ಕು ಕಾಯ್ದೆ, 2005 ಸೆಕ್ಷನ್ 5 (1) ಅಡಿಯಲ್ಲಿ | **'ಸಾರ್ವಜನಿಕ ಮಾಹಿತಿ ಅಧಿಕಾರಿ' ಯಾಗಿ ನೇಮಕ** | ಕೆಲಸದ ಸ್ಥಳ |
|---|---|---|
| 1 | 2 | 3 |
| | 1. ಮೀನುಗಾರಿಕೆ ಸಹಾಯಕ ನಿರ್ದೇಶಕರು, ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು |
| | 2. ಪ್ರಾದೇಶಿಕ ನಿರ್ದೇಶಕರು, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಳಗಾಂ | ಬೆಳಗಾಂ ಕೋಟೆಕೆರೆ ಸಂಬಂಧ |
| | 3. ಉಪ ಅರಣ್ಯ, ಸಂರಕ್ಷಣಾಧಿಕಾರಿಗಳು, ಗದಗ | ಗದಗ, ಭೀಷ್ಮ ಕೆರೆಯ ಸಂಬಂಧ |
| | 4. ಆಯುಕ್ತರು, ಪುರ ಸಭೆ, ಹಾವೇರಿ | ಹಾವೇರಿ, ಅಕ್ಕಮಹಾದೇವಿ ಕೆರೆಯ ಸಂಬಂಧ |
| | 5. ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ಇಲಾಖೆ, ಗುಲ್ಬರ್ಗ | ಗುಲ್ಬರ್ಗ, ಶರಣ ಬಸವೇಶ್ವರ ಕೆರೆಗೆ ಸಂಬಂಧಿಸಿದಂತೆ |
| | 6. ಆಯುಕ್ತರು, ಹಾಸನ ನಗರಾಭಿವೃದ್ಧಿ ಪ್ರಾಧಿಕಾರ, ಹಾಸನ | ಹಾಸನದ ಚನ್ನಪಟ್ಟಣದ ಕೆರೆಗೆ ಸಂಬಂಧಿಸಿದಂತೆ |
| ಮಾಹಿತಿ ಹಕ್ಕು ಕಾಯ್ದೆ, 2005ರ ಸೆಕ್ಷನ್ 5 (2) ಅಡಿಯಲ್ಲಿ | **'ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ' ಯಾಗಿ ನೇಮಕ** | |
| | 1. ಕಛೇರಿ ಅಧೀಕ್ಷಕರು, ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು |
| | 2. ಮೀನುಗಾರಿಕೆ ಸಹಾಯಕ ನಿರ್ದೇಶಕರು, ಪ್ರಾದೇಶಿಕ ನಿರ್ದೇಶಕರ ಕಛೇರಿ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಳಗಾಂ | ಬೆಳಗಾಂ ಕೋಟೆಕೆರೆ ಸಂಬಂಧ |
| | 3. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಗದಗ | ಗದಗ, ಭೀಷ್ಮ ಕೆರೆಯ ಸಂಬಂಧ |
| | 4. ಸಹಾಯಕ ಕಾರ್ಯಪಾಲಕ ಅಭಿಯಂತರರು, ಪುರ ಸಭೆ, ಹಾವೇರಿ | ಹಾವೇರಿ, ಅಕ್ಕಮಹಾದೇವಿ ಕೆರೆಯ ಸಂಬಂಧ |
| | 5. ಸಹಾಯಕ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ಇಲಾಖೆ, ಗುಲ್ಬರ್ಗ | ಗುಲ್ಬರ್ಗ, ಶರಣ ಬಸವೇಶ್ವರ ಕೆರೆಗೆ ಸಂಬಂಧಿಸಿದಂತೆ |
| | 6. ಸಹಾಯಕ ಕಾರ್ಯಪಾಲಕ ಅಭಿಯಂತರರು, ಹಾಸನ ನಗರಾಭಿವೃದ್ಧಿ ಪ್ರಾಧಿಕಾರ, ಹಾಸನ. | ಹಾಸನದ ಚನ್ನಪಟ್ಟಣದ ಕೆರೆಗೆ ಸಂಬಂಧಿಸಿದಂತೆ |
| ಮಾಹಿತಿ ಹಕ್ಕು ಕಾಯ್ದೆ, 2005ರ ಸೆಕ್ಷನ್ 19 (1) ರ ಅಡಿಯಲ್ಲಿ | **'ಮೇಲ್ಮನವಿ ಪ್ರಾಧಿಕಾರದ' ನೇಮಕ** | |
| | 1. ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು. | ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು |
| | 2. ಜಿಲ್ಲಾಧಿಕಾರಿಗಳು, ಬೆಳಗಾಂ | ಬೆಳಗಾಂ ಕೋಟೆಕೆರೆ ಸಂಬಂಧ |
| | 3. ಜಿಲ್ಲಾಧಿಕಾರಿಗಳು, ಗದಗ | ಗದಗ, ಭೀಷ್ಮ ಕೆರೆಯ ಸಂಬಂಧ |
| | 4. ಜಿಲ್ಲಾಧಿಕಾರಿಗಳು, ಹಾವೇರಿ | ಹಾವೇರಿ, ಅಕ್ಕಮಹಾದೇವಿ ಕೆರೆಯ ಸಂಬಂಧ |

| 1 | 2 | 3 |
|---|---|---|
| | 5. ಜಿಲ್ಲಾಧಿಕಾರಿಗಳು, ಗುಲ್ಬರ್ಗ | ಗುಲ್ಬರ್ಗ, ಶರಣ ಬಸವೇಶ್ವರ ಕೆರೆಗೆ ಸಂಬಂಧಿಸಿದಂತೆ |
| | 6. ಜಿಲ್ಲಾಧಿಕಾರಿಗಳು, ಹಾಸನ | ಹಾಸನದ ಚೆನ್ನಪಟ್ಟಣದ ಕೆರೆಗೆ ಸಂಬಂಧಿಸಿದಂತೆ |

ಪಿ.ಡಿ. 117 ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಕೆರೆ ಅಭಿವೃದ್ಧಿ ಪ್ರಾಧಿಕಾರ

**BANGALORE WATER SUPPLY & SEWERAGE BOARD**
**Chief Administrative Officer & Secretary,**
**B.W.S.S.B. Cauvery Bhavan, Bangalore-9**
**NOTIFICATION No: BWSSB CAO-S/66-03-2004/2606 Date: 28th October 2005**

In exercise of Power conferred by Sub Section-2 of Section 88 of BWSSB Act 1964 (Karnataka Act No. 36 of 1964) and with the approval of Government communicated in letter No. ನ.ಅ.ಇ 132 ಎಂ.ಎಸ್.ಐ 2004 dated 23-8-2005, the BWSSB hereby makes the following amendment and published for information of all the concerned.

1. **Title & Commencement**: These Regulations may be called the BWS&SB Cadre, Recruitment and Promotion (Amendment) Regulations 2004.
2. It shall cause into force from the date of publication in the official gazette

**Amendment of Schedule-2** of BWSSB Cadre, Recruitment and Regulations 1981.

Schedule-2 to the BWSSB Cadre, Recruitment and Regulations 1981 shall be and shall always be deemed to have been substituted by Schedule-2 to these Regulations.

**SCHEDULE-2**
**BANGALORE WATER SUPPLY & SEWERAGE BOARD**
**CADRE, RECRUITMENT AND PROMOTION REGULATIONS 2004**

| Sl. No. | Designation & scale of pay of the post | No of Posts | Method of Recruitment | Qualification & experience prescribed for the post | Remarks |
|---|---|---|---|---|---|
| 1 | 2 | 3 | 4 | 5 | 6 |
| 1 | **ENGINEERING**<br>Engineer-In-Chief<br>(Rs.14975-20500)<br>1998 Pay scale | | By promotion from the cadre of Chief Engineer by selection. | 1) Should have put in a minimum of 4 years service as Chief Engineer. | |
| 2 | Chief Engineer<br>(Rs.12550-18500)<br>1998 Pay scale | 5 | By promotion from the cadre of Additional Chief Engineer by selection<br>OR<br>By deputation from any department of Govt. or undertaking having relevant experience in Public Health Engineering. | **For promotion:**<br>Should have put in minimum of 2 years service as Additional Chief Engineer. | |
| 3 | Additional Chief Engineer<br>(Rs. 10925-17600)<br>1998 Pay scale | 8 | By promotion from the cadre of Executive Engineer/ Deputy Chief Engineer.<br>OR<br>By Deputation from any department or undertaking of Govt. having relevant experience preferably in Public Health Engineering from the cadre of Superintending Engineer. | Should have put in a minimum of 4 years service as Executive Engineer and/or Deputy Chief Engineer. Provided if no candidates are available than it may be relaxed to 3 years. | Existing Superintending Engineer post redesignated as Additional Chief Engineer |

| 1 | 2 | 3 | 4 | 5 | 6 |
|---|---|---|---|---|---|
| 4 | Executive Engineer/<br>Deputy Chief Engineer/<br>(Rs. 10350-16850)<br>1998 Pay scale | 23 | By promotion from the cadre of Assistant Executive Engineer on the seniority cum merit<br>OR<br>By Deputation from any department or undertaking of Govt. having relevant experience preferably in Public Health Engineering | Should have put in a minimum of 4 years service as Asst. Executive Engineer and shall possess degree in Engineering/Technology or equivalent qualification | |
| 5 | Assistant Executive Engineer/ Technical Assistant/P.A to EE/<br>(Rs. 7500-15350)<br>1998 Pay scale | 81 | 75% by promotion of Assistant Engineers on the basis of seniority cum merit.<br>25% by promotion of Assistant Engineers (Diploma Holders) on the basis of Seniority cum merit | Should have put in a minimum of 4 years service as Asst. Engineer. | |
| 6 | **Assistant Engineer**<br>Civil,<br>Electrical,<br>Mechanical,<br>Structural,<br>Environment, Computer Science<br>(Rs. 6700-14600)<br>1998 Pay scale | 179 | 1/3 by promotion of Junior Engineer on the basis of seniority-cum-merit. If suitable candidates are not available such vacancies can be considered for direct recruitment.<br><br>2/3 by direct recruitment | Should possess 3 years Diploma in Engineering or equivalent qualification with a minimum of 10 years service as Junior Engineer in the Board, and shall be a Computer Literate through passing minimum of six months duration course in computer basics. 3 years shall be give to acquire computer qualification from the date of Amendment.<br>Should possess a Degree in engineering or Technology or equivalent qualification in the respective faculty from a recognised University of the Union or State Govt. with two years experience in the field and shall be a Computer literate through Passing minimum of six months duration course in computer basics.<br>**PREFERENCE:**<br>(1) Possessing qualification and experience in Public Health Engineering.<br>(2) Possessing P.G. in respective faculty. | |

| 1 | 2 | 3 | 4 | 5 | 6 |
|---|---|---|---|---|---|
| 7 | Junior Engineer (Rs. 4900-12225) 1998 Pay scale | 57 | 90% by Direct Recruitment 10% by Promotion from the Ministerial cadre staff (Group C) of the Board possessing requisite qualification. | **For Direct Recruitment and for Promotion:-** (i) 3 years Diploma in Engineering. Or Technology or equivalent preferably in Public Health Engineering. (ii) 6 months duration course in Computer Science. | |
| 8 | Draughtsman (Rs. 4900-12225) 1998 Pay scale | 4 | | | Post stands abolished after the present incumbent retires/vacates the post |
| | **ADMINISTRATION** | | | | |
| 9 | Chief Administrative officer and Secretary | 1 | By deputation of KAS Group 'A' not below the Selection Grade Officer. | | |
| 10 | Law Officer | 1 | By deputation of a judicial Officer of the rank of Civil Judge (Senior Division) from the Judicial Department. If no officer is available from the Judicial Dept., then the services is to be obtained on contract basis. | | |
| 11 | Personnel Manager (Rs. 10350-16850) 1998 Pay scale | 1 | By promotion of Assistant Personnel Manager/Asst. Secretary/Assistant Welfare Officer | 3 years experience as Assistant Personnel Manager/ Asst. Secretary/ Assistant Welfare Officer. | |
| 12 | Admn. Officer (Rs. 10350-16850) 1998 pay scale | 1 | By promotion from the cadre of Asst. Secretary./Asst. Personnel Manager/Asst. Welfare Officer. | 3 years service as Asst. Secretary/Asst. Personnel Manager/Asst. Welfare Officer. | |
| 13 | Public Relations Officer | 1 | On deputation from the Department of Information and Publicity. If no officer is available from the Department of Information and Publicity, then the services is to be obtained on contract basis possessing a degree of recognised university with Diploma in Public Relations and or Mass Communication of recognised Institution. | | |

